

**ಕರ್ನಾಟಕ ಸರ್ಕಾರ**

ಸಂಖ್ಯೆ: ಪಿಡಿಎಸ್ 69 ಪಿಆರ್‌ಐ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ:08.10.2020

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಯೋಜನೆ, ಕಾರ್ಯಕ್ರಮ ಸಂಯೋಜನೆ,
ಮತ್ತು ಸಾಂಖ್ಯಿಕ ಇಲಾಖೆ.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1916 ಗೆ ಉತ್ತರ ಒದಗಿಸುವ ಬಗ್ಗೆ.

**ಉಲ್ಲೇಖ:** ತಮ್ಮ ಅ.ಸ ಪತ್ರ ಸಂಖ್ಯೆ: ವಿಸಪ್ರಶಾ/15ನೇವಿಸ/7ಅ/ಚುಗು-ಚುರ.ಪ್ರಶ್ನೆ/07/2020, ದಿನಾಂಕ: 21.09.2020.

****

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಮಾನ್ಯ ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆಯ ಸಂಖ್ಯೆ:1916 ಕ್ಕೆ ಸಂಬಂಧಿಸಿದ ಉತ್ತರದ 10 ಪ್ರತಿಗಳನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

G. N. Susheela 8/10/2020
**(ಜಿ. ಎನ್. ಸುಶೀಲ)**
ಸರ್ಕಾರದ ಅಧೀನ ಕಾರ್ಯದರ್ಶಿ-1(ಪ್ರ)
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ

Recevd on
D-9-10-2020

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1916
2. ಸದಸ್ಯರ ಹೆಸರು : ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ)
3. ಉತ್ತರಿಸಬೇಕಾದ ದಿನಾಂಕ : 29.09.2020
4. ಉತ್ತರಿಸಲಿರುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| | |
|---|---|
| ಅ) ಉತ್ತರ ಕರ್ನಾಟಕ ಅಭಿವೃದ್ಧಿ ಹಿತದೃಷ್ಟಿಯಿಂದ ಬೆಳಗಾವಿಯಲ್ಲಿ ನಿರ್ಮಿಸಿದ ಸುವರ್ಣಸೌಧದ ಕಟ್ಟಡಕ್ಕೆ ಕೆಲವು ಇಲಾಖೆಗಳನ್ನು ಸ್ಥಳಾಂತರ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ;<br>ಆ) ಹಾಗಿದ್ದಲ್ಲಿ ಯಾವ ಇಲಾಖೆಯ ಕಛೇರಿಗಳನ್ನು ಸ್ಥಳಾಂತರ ಮಾಡಲಾಗುವುದು; (ಸಂಪೂರ್ಣ ವಿವರ ನೀಡುವುದು) | ಹೌದು. ದಿನಾಂಕ: 30.06.2020 ಮತ್ತು 02.07.2020 ರಂದು ಅಧಿಸೂಚನೆ/ತಿದ್ದೋಲೆಯನ್ನು ಹೊರಡಿಸಲಾಗಿದ್ದು ಅದರಂತೆ 22 ಸರ್ಕಾರಿ/ನಿಗಮದ ಕಛೇರಿಗಳನ್ನು ಸ್ಥಳಾಂತರಗೊಂಡಿದೆ. ಅವುಗಳ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಇ) ಉತ್ತರ ಕರ್ನಾಟಕ ಅಭಿವೃದ್ಧಿ ಹಿತದೃಷ್ಟಿಯಿಂದ ಅಲ್ಲಿಯ ಜನ ಸಾಮಾನ್ಯರಿಗೆ ಕಛೇರಿ ಕೆಲಸಕ್ಕೆ ಅನುಕೂಲವಾಗುವ ಸಲುವಾಗಿ ಹಾಗೂ ಕಟ್ಟಡ ಸದು ಉಪಯೋಗಕ್ಕಾಗಿ ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಸುವರ್ಣ ಸೌಧ ಕಟ್ಟಡವನ್ನು ಅಧಿವೇಶನವನ್ನು ಹೊರತು ಪಡಿಸಿ ರಾಜ್ಯ ಮಟ್ಟದ ಅಂದಾಜು ಸಮಿತಿ ಸಭೆ; ಕೃಷಿ ಪಂಡಿತ ಪ್ರಶಸ್ತಿ ಸಮಾರಂಭ; ರಾಜ್ಯ ಮಟ್ಟದ ಕೃಷಿ ಸಮ್ಮೇಳನ; ವಿವಿಧ ಇಲಾಖೆಗಳ ಪ್ರಗತಿ ಪರಿಶೀಲನಾ ಸಭೆ; ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಗುಟಕಾ ಮತ್ತು ತಂಬಾಕು ಉತ್ಪನ್ನಗಳ ನಿಷೇಧ ಕುರಿತಾಗಿ ವಲಯಮಟ್ಟದ ತರಬೇತಿ; ಕರ್ನಾಟಕ ವಿಧಾನ ಮಂಡಲದ ಮತ್ತು ಪಂಚಾಯತ್ ರಾಜ್ ಇಲಾಖೆಯ ವಲಯ ಮಟ್ಟದ ಸಮಿತಿಯ ಸಭೆ; ಉನ್ನತ ಶಿಕ್ಷಣ ಇಲಾಖೆಯ ಕಾಗದ ಪತ್ರಗಳ ಸಮಿತಿ ಸಭೆ; ಸಮಾಜ ಕಲ್ಯಾಣ ಇಲಾಖೆಯ, ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿ ಸಭೆ; ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಮೇಲಿನ ದೌರ್ಜನ್ಯ ತಡೆಗಟ್ಟುವಿಕೆ ಹಾಗೂ ಅಸ್ಪೃಶ್ಯತೆ ನಿರ್ಮೂಲನೆ ಕುರಿತಾಗಿ ಜಿಲ್ಲಾ ಮಟ್ಟದ ವಿಚಾರಣ ಸಂಕೀರ್ಣ; ಕಂದಾಯ ಇಲಾಖೆಯ ಬೆಳಗಾವಿ ಹಾಗೂ ಗುಲ್ಬರ್ಗ ವಿಭಾಗ ಮಟ್ಟದ ಅಧಿಕಾರಿಗಳ ಸಭೆ; ಜಲಸಂಪನ್ಮೂಲ ಇಲಾಖೆಯ ಅಂದಾಜು ಸಮಿತಿ ಸಭೆ; ಲೋಕೋಪಯೋಗಿ ಇಲಾಖೆಯ ಬೆಳಗಾವಿ ವೃತ್ತದ ಪ್ರತಿ ಪರಿಶೀಲನಾ ಸಭೆ; |

.....2

| | |
|---|---|
| | ನಗರಾಭಿವೃದ್ಧಿ ಇಲಾಖೆ ಭರವಸೆ ಸಮಿತಿ ಸಭೆ; ಬೆಳಗಾವಿ ಜಿಲ್ಲೆಯ ವಕ್ಫ ಆಸ್ತಿಗಳ ಸಂರಕ್ಷಣೆಗಾಗಿ ಸಹಾಯಧನ ಒದಗಿಸುವ ಕುರಿತು ಸಭೆ; ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಹಾಗೂ ರಾಣಿ ಚೆನ್ನಮ್ಮ ವಿಶ್ವವಿದ್ಯಾಲಯದ ಲೆಕ್ಕಪರಿಶೀಲನಾ ಸಭೆ; ಪ್ರವಾಸೋಧ್ಯಮ ಇಲಾಖೆಯ ಪ್ರವಾಸೋಧ್ಯಮ ಅಭಿವೃದ್ಧಿ ಪಡಿಸುವುದಕ್ಕೆ ಸಭೆ; ಜಿಲ್ಲಾ ಮಟ್ಟದ ಆಧಾರ ಕಾರ್ಯಾಗಾರ; ಮಾನವ ಹಕ್ಕುಗಳ ಅರಿವು ಜಾಗ್ರುತ ಕಾರ್ಯಗಾರ; ಅರಣ್ಯೀಕರಣ ಕಾಮಗಾರಿಗಳಿಗೆ ಸಂಬಂಧಿಸಿದಂತೆ ತಾಂತ್ರಿಕ ಕಾರ್ಯಾಗಾರ; ಗ್ರಾಮ ಪಂಚಾಯಿತ ಚುನಾವಣಾ ಪೂರ್ವಸಿದ್ದತೆ ಸಭೆ ಹಾಗೂ ವಿವಿಧ ಇಲಾಖೆಗಳ ಪ್ರಗತಿ ಪರಿಶೀಲನಾ ಸಭೆಗಳನ್ನು ಸುವರ್ಣಸೌಧದ ಕಟ್ಟಡದಲ್ಲಿ ಜರುಗಿಸಿದ್ದು, ವರ್ಷ ಪೂರ್ತಿ ವಿವಿಧ ಚಟುವಟಿಕೆಗಳಿಗಾಗಿ ಸುವರ್ಣಸೌಧ ಕಟ್ಟಡವು ಸದ್ಬಳಕೆಯಾಗುತ್ತಿದೆ.<br><br>ಪ್ರಸ್ತುತ, 22 ಸರ್ಕಾರಿ/ ನಿಗಮದ ಕಛೇರಿಗಳನ್ನು ಸ್ಥಳಾಂತರಿಸಲಾಗಿದ್ದು, ಅವುಗಳು ಕಾರ್ಯನಿರ್ವಹಿಸುತ್ತಿವೆ. |

ಪಿಡಿಎಸ್ 69 ಪಿಆರ್ಐ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಅನುಬಂಧ

| ಕ್ರಸಂ | ಕಚೇರಿ/ನಿಗಮ/ಆಯೋಗ | ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಆಡಳಿತ ಇಲಾಖೆ | ಅಂತಿಮವಾಗಿ ಹಂಚಿಕೆ ಮಾಡಲಾದ ಕೊಠಡಿ ಸಂಖ್ಯೆ: | ಬಾಡಿಗೆ ಮೊತ್ತ (ಪ್ರತಿ ತಿಂಗಳು ರೂ ಗಳಲ್ಲಿ) | ಬಾಡಿಗೆ ಮೊತ್ತ (ಪ್ರತಿ ವರ್ಷಕ್ಕೆ ರೂ ಗಳಲ್ಲಿ) | ಸ್ವಾಧೀನ ಗೊಂಡ ದಿನಾಂಕ |
|---|---|---|---|---|---|---|---|
| 1 | 2 | 3 | 3 | 4 | 6 | 7 | |
| 1 | ಜಿಲ್ಲಾ ಉದ್ಯೋಗ ವಿನಿಮಯ ಕಛೇರಿ, ಬೆಳಗಾವಿ | ಉಜ್ಜನಕೊಪ್ಪ ಬಿಲ್ಡಿಂಗ್ ಸಿ.ಟಿ.ಎಸ್ ನಂ:4838/16 ಸದಾಶಿವ ನಗರ ಬೆಳಗಾವಿ | ಕೌಶಲ್ಯಾಭಿವೃದ್ಧಿ ಇಲಾಖೆ | TP2 & TP3 | 25000 | 300000 | 07-09-2020 |
| 2 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬೆಳಗಾವಿ | ಜಿಲ್ಲಾ ತೋಟಗಾರಿಕೆ ಬೆಳೆಗಾರರ ಉತ್ಪನ್ನಗಳ ಮಾರಾಟ ಮತ್ತು ಸಂಸ್ಕರಣಾ ಸಹಕಾರಿ ಸಂಘ ನಿ.ತೋಟಗಾರಿಕೆ ಇಲಾಖೆ, ಆವರಣ ಚೆನ್ನಮ್ಮ ವೃತ್ತ ಬೆಳಗಾವಿ | ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ | TP4 | 22066 | 264792 | 18-09-2020 |
| 3 | ಹಿರಿಯ ಭೂ ವಿಜ್ಞಾನಿ, ಜಿಲ್ಲಾ ಅಂತರ್ಜಲ ಕಛೇರಿ, ಅಂತರ್ಜಲ ನಿರ್ದೇಶನಾಲಯ, ಬೆಳಗಾವಿ | ಬಿ.ಸಿ.ವಿಜಾಪೂರ, ಸಿ.ಸಿ.ನಂ.09. ಆರ್ ಪಿಡಿ ಕಾಲೇಜ್ ಎದುರು, ಟಿಳಕವಾಡಿ ಬೆಳಗಾವಿ | ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ | C37, C38, & C39 | 21350 | 256200 | 01-09-2020 |
| 4 | ಉಪನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ ಬೆಳಗಾವಿ | ಶ್ರೀ ಲಕ್ಷ್ಮೀ ಸಿ.ಟಿ.ಲೈನ್ ಬಿಲ್ಡಿಂಗ್, 206, 2ನೇ ಮಹಡಿ, ಚವಾಟಗಲ್ಲಿ ಬೆಳಗಾವಿ | ಪ್ರವಾಸೋದ್ಯಮ ಇಲಾಖೆ | C35 & C36 | 16100 | 193200 | 01-09-2020 |
| 5 | ಸಹಾಯಕ ನಿರ್ದೇಶಕರು ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ಬೆಳಗಾವಿ | ಉಜ್ಜನಕೊಪ್ಪ ಬಿಲ್ಡಿಂಗ್, ಉದ್ಯೋಗ ವಿನಿಮಯ ಕಛೇರಿ ಮೇಲೆ, ಸದಾಶಿವ ನಗರ, ಬೆಳಗಾವಿ | ನಗರಾಭಿವೃದ್ಧಿ ಇಲಾಖೆ | C44 | 20000 | 240000 | 01-09-2020 |
| 6 | ವಿಶೇಷ ಜಿಲ್ಲಾಧಿಕಾರಿಗಳು, ಭೂ ಸ್ವಾಧೀನ ಪುನರ್ವಸತಿ ಮತ್ತು ಪುನರ್ ನಿರ್ಮಾಣ, ಬೃಹತ್ ನೀರಾವರಿ ಯೋಜನೆಗಳು, ಬೆಳಗಾವಿ | ಎಮ್.ಎಮ್.ಉಜ್ಜಿನಕೊಪ್ಪ, ಸಿ.ಟಿ.ಎಸ್.ನಂ 3941/2ಬಿ5 ಮನೆ ನಂ.169 ಕ್ಲಬ್ ರೋಡ್ ಬೆಳಗಾವಿ | ಕಂದಾಯ ಇಲಾಖೆ ಜಲಸಂಪನ್ಮೂಲ ಇಲಾಖೆ | 322 & 323 | 25000 | 300000 | 17-09-2020 |

# ಅನುಬಂಧ

| ಕ್ರಸಂ | ಕಚೇರಿ/ನಿಗಮ/ಆಯೋಗ | ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಆಡಳಿತ ಇಲಾಖೆ | ಅಂತಿಮವಾಗಿ ಹಂಚಿಕೆ ಮಾಡಲಾದ ಕೊಠಡಿ ಸಂಖ್ಯೆ: | ಬಾಡಿಗೆ ಮೊತ್ತ (ಪ್ರತಿ ತಿಂಗಳು ರೂ ಗಳಲ್ಲಿ) | ಬಾಡಿಗೆ ಮೊತ್ತ (ಪ್ರತಿ ವರ್ಷಕ್ಕೆ ರೂ ಗಳಲ್ಲಿ) | ಸ್ಥಳಾಂತರ ಗೊಂಡ ದಿನಾಂಕ |
|---|---|---|---|---|---|---|---|
| 1 | 2 | 3 | 3 | 4 | 6 | 7 | |
| 7 | ಜಿಲ್ಲಾ ವ್ಯವಸ್ಥಾಪಕರು ಡಿ.ದೇವರಾಜ ಅರಸು ಹಿಂದಿಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ ಬೆಳಗಾವಿ | ಎಸ್.ಜೆ.ಎಸ್.ವೈ ಮಾರಾಟ ಮಳಿಗೆಗಳ ಕಟ್ಟಡ 2ನೇ ಮಹಡಿ ಎಪಿಎಂಸಿ ರಸ್ತೆ ನೆಹರು ನಗರ ಬೆಳಗಾವಿ-590010 | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | 104 & 105 | 750 | 9000 | 01-09-2020 |
| | ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ ನಿಯಮಿತ ಬೆಳಗಾವಿ | | | | | | |
| | ಕರ್ನಾಟಕ ಉಪ್ಪಾರ ಅಭಿವೃದ್ಧಿ ನಿಗಮ ನಿಯಮಿತ ಬೆಳಗಾವಿ | ಎಸ್.ಜೆ.ಎಸ್.ವೈ ಮಾರಾಟ ಮಳಿಗೆಗಳ ಕಟ್ಟಡ 2ನೇ ಮಹಡಿ ಎಪಿಎಂಸಿ ರಸ್ತೆ ನೆಹರು ನಗರ ಬೆಳಗಾವಿ-590010 | | | | | |
| | ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಳಗಾವಿ | | | | | | |
| | ಕರ್ನಾಟಕ ಆರ್ಯ ವೈಶ್ಯ ಸಮುದಾಯ ಅಭಿವೃದ್ಧಿ ನಿಗಮ ಬೆಳಗಾವಿ | | | | | | |
| 8 | ಸಹಾಯಕ ಆಯುಕ್ತರು, (ಭೂ ಸ್ವಾ) ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಉಪವಿಭಾಗ ನಂ-2 ಬೆಳಗಾವಿ(KSHIP) | ಶ್ರೇಯಸ್ ಬೆಲ್ಲದ ಬಿಲ್ಡಿಂಗ್, 1ನೇ ಮಹಡಿ ಟಿಎಸ್‌ನಂ 4855/56, 2ನೇ ಮುಖ್ಯ ರಸ್ತೆ, 1ನೇ ಅಡ್ಡ ರಸ್ತೆ, ಲಕ್ಷ್ಮೀ ಕಾಂಪ್ಲೆಕ್ಸ್ ಹತ್ತಿರ ಸದಾಶಿವ ನಗರ ಬೆಳಗಾವಿ | ಲೋಕೋಪಯೋಗಿ ಇಲಾಖೆ | B 13 | 25000 | 300000 | 05-09-2020 |
| 9 | ಜಿಲ್ಲಾ ಮಕ್ಕಳ ರಕ್ಷಣಾ ಘಟಕ (ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ) | ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಹಿಂದುಗಡೆ ಶಿವಂ ರೆಸಿಡೆನ್ಸಿ ಎದುರುಗಡೆ, ಶಾರದಾ ಎನ್‌ಕ್ಲೇವ್ ಪ್ಲಾಟ್ ನಂ 255, ಸಿಟಿಎಸ್ ನಂ 9216 1ನೇ ಮಹಡಿ ಶಿವಬಸವನಗರ ಬೆಳಗಾವಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | 204 | 15000 | 180000 | 03-09-2020 |

# ಅನುಬಂಧ

| ಕ್ರಸಂ | ಕಚೇರಿ/ನಿಗಮ/ಆಯೋಗ | ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಆಡಳಿತ ಇಲಾಖೆ | ಅಂತಿಮವಾಗಿ ಹಂಚಿಕೆ ಮಾಡಲಾದ ಕೊಠಡಿ ಸಂಖ್ಯೆ: | ಬಾಡಿಗೆ ಮೊತ್ತ (ಪ್ರತಿ ತಿಂಗಳು ರೂ ಗಳಲ್ಲಿ) | ಬಾಡಿಗೆ ಮೊತ್ತ (ಪ್ರತಿ ವರ್ಷಕ್ಕೆ ರೂ ಗಳಲ್ಲಿ) | ಸ್ಥಳಾಂತರ ಗೊಂಡ ದಿನಾಂಕ |
|---|---|---|---|---|---|---|---|
| 1 | 2 | 3 | 3 | 4 | 6 | 7 | |
| 10 | ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಬೆಳಗಾವಿ | ಬೆಳಗಾವಿ | ಕೌಶಲ್ಯಾಭಿವೃದ್ಧಿ ಇಲಾಖೆ | 12 | ಉದ್ಯೋಗ ವಿನಿಮಯ ಕಛೇರಿಯಲ್ಲಿ ಒಂದು ಕೊಠಡಿಯಲ್ಲಿ | | 27-08-2020 |
| 11 | ಆಯುಕ್ತರು ಕರ್ನಾಟಕ ಮಾಹಿತಿ ಆಯೋಗ ಬೆಳಗಾವಿ | ಬೆಳಗಾವಿ | ಸಿಆಸು ಇಲಾಖೆ | 140, 141 & 142 | | | 18-05-2020 |
| 12 | ಜಂಟಿ ನಿರ್ದೇಶಕರು, ಸಹಕಾರ ಸಂಘಗಳ, ಲೆಕ್ಕಪರಿಶೋಧನಾ ಇಲಾಖೆ, ಬೆಳಗಾವಿ ಜಿಲ್ಲೆ, ಬೆಳಗಾವಿ | ಅ/ಂ ಶ್ರೀ ಸುರೇಶ್ ಶಂಕರ್ ನಾಗಮೋತಿ, "ಈಶ" ಸಿ.ಟಿ.ಎಸ್. ನಂ. 10314, ಫ್ಲಾಟ್ ನಂ.311, ಸೆಕ್ಟರ್ ನಂ.2, ಎಂ.ಎಂ. ಎಕ್ಸ್‌ಟೆನ್ಷನ್, ಧರ್ಮನಾಥ ಸರ್ಕಲ್ ಹತ್ತಿರ, ಶಿವಬಸವನಗರ, ಬೆಳಗಾವಿ | ಸಹಕಾರ ಇಲಾಖೆ | 16, 17, 17A & 18 | 40000 | 480000 | 01-09-2020 |
| 13 | ಕಾರ್ಯನಿರ್ವಾಹಕ ಅಭಿಯಂತರರು, ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿ, ವಿಭಾಗೀಯ ಕಛೇರಿ, ಬೆಳಗಾವಿ | ಬೆಳಗಾವಿ | ಸಹಕಾರ ಇಲಾಖೆ | 23 & 24 | 5588 | 67056 | 18-09-2020 |
| 14 | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿ, ವಿಭಾಗೀಯ ಕಛೇರಿ, ಬೆಳಗಾವಿ | ಬೆಳಗಾವಿ | ಸಹಕಾರ ಇಲಾಖೆ | 25 & 26 | 2779 | 33348 | 18-09-2020 |
| 15 | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಳಗಾವಿ | ಬೆಳಗಾವಿ | ಇಂಧನ ಇಲಾಖೆ | 63 & 64 | 25300 | 303600 | 01-09-2020 |

# ಅನುಬಂಧ

| ಕ್ರಸಂ | ಕಚೇರಿ/ನಿಗಮ/ಆಯೋಗ | ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಆಡಳಿತ ಇಲಾಖೆ | ಅಂತಿಮವಾಗಿ ಹಂಚಿಕೆ ಮಾಡಲಾದ ಕೊಠಡಿ ಸಂಖ್ಯೆ: | ಬಾಡಿಗೆ ಮೊತ್ತ (ಪ್ರತಿ ತಿಂಗಳು ರೂ ಗಳಲ್ಲಿ) | ಬಾಡಿಗೆ ಮೊತ್ತ (ಪ್ರತಿ ವರ್ಷಕ್ಕೆ ರೂ ಗಳಲ್ಲಿ) | ಸ್ಥಳಾಂತರ ಗೊಂಡ ದಿನಾಂಕ |
|---|---|---|---|---|---|---|---|
| 1 | 2 | 3 | 3 | 4 | 6 | 7 | |
| 16 | ಶಿಶು ಅಭಿವೃದ್ಧಿ ಯೋಜನೆ ಕಛೇರಿ, ಬೆಳಗಾವಿ ಗ್ರಾಮೀಣ | ಬೆಳಗಾವಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | B4 & B5 | ಲೀಸ್ ಮೇಲೆ | | 01-09-2020 |
| 17 | ಜಂಟಿ ನಿರ್ದೇಶಕರ ಕಛೇರಿ, ಕೈಮಗ್ಗ ಮತ್ತು ಜವಳಿ ಇಲಾಖೆ, ಪಶ್ಚಿಮ ವಲಯ/ವಿಭಾಗ, ಬೆಳಗಾವಿ | ಶ್ರೀಮತಿ ಸುಜಾತಾ ದೀಪಕ ಲೆಂಗಡೆ ಇವರ ಮಾಲೀಕತ್ವದ ಸ.ನಂ. 1382, ಲೆಂಗಡೆ ಬಿಲ್ಡಿಂಗ್ 1ನೇ ಮಹಡಿ ಕ್ಲಬ್ ರಸ್ತೆ ಬೆಳಗಾವಿ | ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | B12 | 26800 | 321600 | 01-09-2020 |
| 18 | ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ನಿಯಮಿತ, ಬೆಳಗಾವಿ | ಶ್ರೀಮತಿ ಕೌಸರ ಶಬ್ಬಿರ ಇನಾಮದಾರ ನಂ:2344, 2ನೇ ಕ್ರಾಸ್, ಬ್ರಹ್ಮ ಕುಮಾರಿ ಆಶ್ರಮ ಹತ್ತಿರ ಮಹಾಂತೇಶ ನಗರ ಬೆಳಗಾವಿ | ಸಮಾಜ ಕಲ್ಯಾಣ ಇಲಾಖೆ | 221 | 17000 | 204000 | 07-09-2020 |
| 19 | ಸಹಾಯಕ ಪ್ರಧಾನ ವ್ಯವಸ್ಥಾಪಕರು, ಡಿ ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ, ಬೆಳಗಾವಿ | ಎಸ್.ಜೆ.ಎಸ್.ವೈ ಮಾರಾಟ ಮಳಿಗೆಗಳ ಕಟ್ಟಡ 3ನೇ ಮಹಡಿ ಎಪಿಎಂಸಿ ರಸ್ತೆ ನೆಹರು ನಗರ ಬೆಳಗಾವಿ-590010 | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | B1, B2 & TP1 | 750 | 9000 | 18-09-2020 |
| 20 | ಉಪ ಪ್ರಧಾನ ವ್ಯವಸ್ಥಾಪಕರು, ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ಬೆಳಗಾವಿ | ಶ್ರೀ. ಜಿ. ಎನ್. ಮೆಟಗುಡ್ಡ ಪ್ಲಾಟ್ ನಂ:2366, ಸೆಕ್ಟರ್ ನಂ:11 1ನೇ ಕ್ರಾಸ್ ಮಹಾಂತೇಶ ನಗರ ಬೆಳಗಾವಿ | ಸಮಾಜ ಕಲ್ಯಾಣ ಇಲಾಖೆ | 122 | 7500 | 90000 | 01-09-2020 |
| 21 | ಜಿಲ್ಲಾ ವ್ಯವಸ್ಥಾಪಕರು, ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ಬೆಳಗಾವಿ | ಶ್ರೀ. ಜಿ. ಎನ್. ಮೆಟಗುಡ್ಡ ಪ್ಲಾಟ್ ನಂ:2366, ಸೆಕ್ಟರ್ ನಂ:11 1ನೇ ಕ್ರಾಸ್ ಮಹಾಂತೇಶ ನಗರ ಬೆಳಗಾವಿ | ಸಮಾಜ ಕಲ್ಯಾಣ ಇಲಾಖೆ | 123 | 23800 | 285600 | 01-09-2020 |

# ಅನುಬಂಧ

| ಕ್ರ.ಸಂ | ಕಚೇರಿ/ನಿಗಮ/ಆಯೋಗ | ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಆಡಳಿತ ಇಲಾಖೆ | ಅಂತಿಮವಾಗಿ ಹಂಚಿಕೆ ಮಾಡಲಾದ ಕೊಠಡಿ ಸಂಖ್ಯೆ: | ಬಾಡಿಗೆ ಮೊತ್ತ (ಪ್ರತಿ ತಿಂಗಳು ರೂ ಗಳಲ್ಲಿ) | ಬಾಡಿಗೆ ಮೊತ್ತ (ಪ್ರತಿ ವರ್ಷಕ್ಕೆ ರೂ ಗಳಲ್ಲಿ) | ಸ್ಥಳಾಂತರಗೊಂಡ ದಿನಾಂಕ |
|---|---|---|---|---|---|---|---|
| 1 | 2 | 3 | 3 | 4 | 6 | 7 | |
| 22 | ಯೋಜನಾ ನಿರ್ದೇಶಕರು, ನಿರ್ಮಿತಿ ಕೇಂದ್ರ, ಬೆಳಗಾವಿ | ಬೆಳಗಾವಿ | ವಸತಿ ಇಲಾಖೆ/ ಜಿಲ್ಲಾಧಿಕಾರಿ | 106 & 107 | 15000 | 180000 | 18-09-2020 |
| | | | | ಒಟ್ಟು ಬಾಡಿಗೆ | 334783 | 4017396 | |

G. N. Susheela 8/10/2020

(ಜಿ.ಎನ್ ಸುಶೀಲ)

ಸರ್ಕಾರದ ಅಧೀನ ಕಾರ್ಯದರ್ಶಿ-I (ಪ್ರ)

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ.

**ಕರ್ನಾಟಕ ಸರ್ಕಾರ**

ಸಂಖ್ಯೆ: ಪಿಡಿಎಸ್ 64 ಕೆಎಲ್ಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:12.10.2020.

ಇವರಿಂದ

**ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,**
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ,
ಬೆಂಗಳೂರು.

ಇವರಿಗೆ

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭಾ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಬಸನಗೌಡರ್ ಪಾಟೀಲ್ (ಯತ್ನಾಳ್) (ವಿಜಯಪುರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1810ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ರವರ ಪತ್ರ ದಿನಾಂಕ:21.09.2020.

* * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಬಸನಗೌಡರ್ ಪಾಟೀಲ್ (ಯತ್ನಾಳ್) (ವಿಜಯಪುರ)-ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1810ಕ್ಕೆ ಉತ್ತರವನ್ನು ಸಿದ್ಧಪಡಿಸಿ ಈ ಪತ್ರಕ್ಕೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

Received
13/10/2020

ನಿರ್ದೇಶಕರು,
ಎಡಿಬಿ ವಿಭಾಗ,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

**ಪ್ರತಿ ಮಾಹಿತಿಗಾಗಿ:**

1. ಮಾನ್ಯ ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಆಪ್ತ ಕಾರ್ಯದರ್ಶಿಗಳು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಕರ್ನಾಟಕ ವಿಧಾನಸಭೆ

| | | |
|---|---|---|
| 1). ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1810 |
| 2). ಸದಸ್ಯರ ಹೆಸರು | : | ಶ್ರೀ ಬಸನಗೌಡ ರ್ ಪಾಟೀಲ್ (ಯತ್ನಾಳ್) (ವಿಜಯಪುರ) |
| 3). ಉತ್ತರಿಸುವ ದಿನಾಂಕ | : | 29.09.2020 |
| 4). ಉತ್ತರಿಸುವ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | 2019-20 ಮತ್ತು 2020-21ನೇ ಸಾಲಿನಲ್ಲಿ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ನಿಧಿಯಡಿ ಬಿಡುಗಡೆ ಮಾಡಿರುವ ಅನುದಾನ ಎಷ್ಟು, ಈ ಅನುದಾನ ಬಾಕಿ ಉಳಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ, | ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿ 2019-20 ಮತ್ತು 2020-21ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನದ ವಿವರಗಳು ಈ ಕೆಳಗಿನಂತಿವೆ:-<br>(ರೂ.ಕೋಟಿಗಳಲ್ಲಿ)<br>ಕ್ರ.ಸಂ / ವರ್ಷ / ಬಿಡುಗಡೆಯಾದ ಅನುದಾನ<br>1 / 2019-20 / 299.67<br>2 / 2020-21 / 141.00<br><br>ಹೌದು ಬಂದಿದೆ. |
| (ಆ) | ಹಾಗಿದ್ದಲ್ಲಿ, ಈ ಅನುದಾನ ಬಾಕಿ ಉಳಿಯಲು ಕಾರಣಗಳೇನು, ಬಾಕಿ ಉಳಿದಿರುವ ಅನುದಾನವನ್ನು ಯಾವಾಗ ಬಿಡುಗಡೆ ಮಾಡಲಾಗುವುದು, | ಅನುಷ್ಠಾನಾಧಿಕಾರಿಗಳು ಜಿಲ್ಲಾ ಹಂತದಲ್ಲಿ ನಿಗದಿತ ಕಾಲಾವಧಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸದ ಕಾರಣ ಅನುದಾನ ಬಾಕಿ ಉಳಿದಿರುತ್ತದೆ. ಜಿಲ್ಲಾಧಿಕಾರಿಗಳ ಪಿ.ಡಿ ಖಾತೆಯಲ್ಲಿ ಆರಂಭಿಕ ಶಿಲ್ಕು ಸೇರಿ ಲಭ್ಯವಿರುವ ಅನುದಾನದಲ್ಲಿ ಶೇ.75ರಷ್ಟು ವೆಚ್ಚ ಭರಿಸಿದ ನಂತರ ಆರ್ಥಿಕ ಇಲಾಖೆಯ ಸಹಮತಿ ಪಡೆದು ಉಳಿದಿರು ಅನುದಾನವನ್ನು ಬಿಡುಗಡೆ ಮಾಡಲಾಗುತ್ತದೆ. |
| (ಇ) | ಸದರಿ ನಿಧಿಯನ್ನು ಹೆಚ್ಚಳ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ, ಹಾಗಿದ್ದಲ್ಲಿ, ಈ ಕುರಿತು ಸರ್ಕಾರದ ನಿಲುವೇನು? | ಇಲ್ಲಾ |

ಸಂಖ್ಯೆ: ಪಿಡಿಎಸ್ 64 ಕೆಎಲ್ಎಸ್ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಬಸನಗೌಡರ್ ಪಾಟೀಲ್ (ಯತ್ನಾಳ್) ವಿಜಯಪುರ ಮತಕ್ಷೇತ್ರ ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ-1810ಕ್ಕೆ ಉತ್ತರ.

## ಪೂರಕ ಟಿಪ್ಪಣಿ

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಬಸನಗೌಡರ್ ಪಾಟೀಲ್ (ಯತ್ನಾಳ್) ವಿಜಯಪುರ ಮತಕ್ಷೇತ್ರ ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ-1810ರ ಪತ್ರದ ವಿಷಯ ಹೀಗಿದೆ:

1. 2019-20 ಮತ್ತು 2020-21ನೇ ಸಾಲಿನಲ್ಲಿ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ನಿಧಿಯಡಿ ಬಿಡುಗಡೆ ಮಾಡಿರುವ ಅನುದಾನ ಎಷ್ಟು, ಈ ಅನುದಾನ ಬಾಕಿ ಉಳಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ,

2. ಹಾಗಿದ್ದಲ್ಲಿ, ಈ ಅನುದಾನ ಬಾಕಿ ಉಳಿಯಲು ಕಾರಣಗಳೇನು, ಬಾಕಿ ಉಳಿದಿರುವ ಅನುದಾನವನ್ನು ಯಾವಾಗ ಬಿಡುಗಡೆ ಮಾಡಲಾಗುವುದು.

3. ಸದರಿ ನಿಧಿಯನ್ನು ಹೆಚ್ಚಳ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ, ಹಾಗಿದ್ದಲ್ಲಿ, ಈ ಕುರಿತು ಸರ್ಕಾರದ ನಿಲುವೇನು?

**ಉತ್ತರ:**

1. ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿ 2019-20 ಮತ್ತು 2020-21ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನದ ವಿವರಗಳ ಈ ಕೆಳಗಿನಂತಿವೆ:-

(ರೂ.ಕೋಟಿಗಳಲ್ಲಿ)

| ಕ್ರಮ ಸಂಖ್ಯೆ | ವರ್ಷ | ಸರ್ಕಾರದಿಂದ ಬಿಡುಗಡೆಯಾದ ಅನುದಾನ |
|---|---|---|
| 1 | 2019-20 | 299.67 |
| 2 | 2020-21 | 141.00 |

2. ಜಿಲ್ಲಾ ಹಂತದಲ್ಲಿ ಅನುಷ್ಠಾನಾಧಿಕಾರಿಗಳು ನಿಗದಿತ ಕಾಲಾವಧಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸದ ಕಾರಣ ಅನುದಾನ ಬಾಕಿ ಉಳಿದಿರುತ್ತದೆ. ಜಿಲ್ಲಾಧಿಕಾರಿಗಳ ಪಿ.ಡಿ.ಖಾತೆಯಲ್ಲಿ ಆರಂಭಿಕ ಶಿಲ್ಕು ಸೇರಿ ಲಭ್ಯವಿರುವ ಅನುದಾನದಲ್ಲಿ ಶೇ 75ರಷ್ಟು ವೆಚ್ಚ ಭರಿಸಿದ ನಂತರ ಆರ್ಥಿಕ ಇಲಾಖೆಯ ಸಹಮತಿ ಪಡೆದು ಉಳಿದಿರುವ ಅನುದಾನವನ್ನು ಬಿಡುಗಡೆ ಮಾಡಲಾಗುತ್ತದೆ.

ರಾಜ್ಯದಲ್ಲಿ ಜುಲೈ-2020ರ ಮಾಹೆಯ ಅಂತ್ಯದವರೆಗೆ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಅನುದಾನ ರೂ.656.10 ಕೋಟಿಗಳಿದ್ದು, ವಾಸ್ತಾವಿಕವಾಗಿ ಆರ್ಥಿಕ ಇಲಾಖೆಯ ಆರಂಭಿಕ ಶಿಲ್ಕು ಸೇರಿ ಲಭ್ಯವಿರುವ ಅನುದಾನದಲ್ಲಿ ಶೇ75 ರಷ್ಟು ವೆಚ್ಚ ಮಾಡಿದಾಗ ಮಾತ್ರ ಅನುದಾನ ಬಿಡುಗಡೆಮಾಡಲು ಸಹಮತಿ ನೀಡುತ್ತದೆ. ಆದರೆ ಪ್ರಸ್ತಕ ಸಾಲಿನಲ್ಲಿ ರೂ.656.10 ಕೋಟಿಗಳ ಅನುದಾನ ಇನ್ನೂ ಜಿಲ್ಲಾಧಿಕಾರಿಗಳ ಖಾತೆಯಲ್ಲಿ ಬಾಕಿ ಇದ್ದರೂ ಸಹ 2020-21ನೇ ಸಾಲಿನಲ್ಲಿ ಮೊದಲನೆಯ ಕಂತಿನ ಅನುದಾನ ರೂ.150.00 ಕೋಟಿಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ಸಹಮತಿ ನೀಡಿದ್ದು, ಸರ್ಕಾರದ ಆದೇಶ ಸಂಖ್ಯೆ:ಪಿಡಿಎಸ್ 57 ಕೆಎಲ್ಎಸ್ 2020, ದಿನಾಂಕ:18.09.2020 ರಂದು ಬಿಡುಗಡೆ ಮಾಡಲಾಗಿರುತ್ತದೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1781

ಸದಸ್ಯರ ಹೆಸರು : ಶ್ರೀ ಚಂದ್ರಪ್ಪ ಎಂ.(ಹೊಳಲ್ಕೆರೆ)

ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

ಉತ್ತರಿಸಬೇಕಾದ ದಿನಾಂಕ : 29.09.2020

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಡಾ.ನಂಜುಂಡಪ್ಪನವರ ವರದಿಯಂತೆ ಪ್ರಾದೇಶಿಕ ಅಸಮತೋಲನವನ್ನು ನಿವಾರಣೆ ಮಾಡಲು ಹೊರಡಿಸಿರುವ ಸರ್ಕಾರಿ ಆದೇಶ ಎಂದಿನಿಂದ ಜಾರಿಗೆ ಬಂದಿದೆ. | ಪ್ರಾದೇಶಿಕ ಅಸಮತೋಲನೆ ನಿವಾರಿಸಲು ಹೊರಡಿಸಿರುವ ಸರ್ಕಾರಿ ಆದೇಶ ಸಂಖ್ಯೆ:ಯೋಇ 72 ಯೋವಿವಿ 2005(II), ದಿನಾಂಕ:29.04.2008ರಂದು ಜಾರಿಗೆ ಬಂದಿದೆ. |
| ಆ) | ಈ ಅಸಮತೋಲನ ತಾಲ್ಲೂಕುಗಳನ್ನು ಸಮತೋಲನ ತಾಲ್ಲುಕುಗಳನ್ನಾಗಿ ಪರಿವರ್ತಿಸಲು ಸರ್ಕಾರ ಇದುವರೆವಿಗೂ ಹಾಕಿಕೊಂಡಿರುವ ಕಾರ್ಯಕ್ರಮಗಳೇನು; | 2007-08 ರಿಂದ 2020-21ನೇ ಸಾಲಿನವರೆಗೆ ಹಿಂದುಳಿದ ತಾಲ್ಲೂಕುಗಳಿಗೆ, 32 ಇಲಾಖೆಗಳಲ್ಲಿನ 134 ವಿವಿಧ ಯೋಜನೆಗಳಿಗೆ/ಕಾರ್ಯಕ್ರಮಗಳಿಗೆ ಅನುದಾನವನ್ನು ನಿಗದಿ ಪಡಿಸಿ ಅನುಷ್ಠಾನಗೊಳಿಸಲಾಗುತ್ತಿದೆ. (ಕಾರ್ಯಕ್ರಮವಾರು ವಿವರವನ್ನು ಅನುಭಂದ-1ರಲ್ಲಿ ನೀಡಲಾಗಿದೆ) |
| ಇ) | ಅಸಮತೋಲನವನ್ನು ನಿವಾರಣೆ ಮಾಡಲು ಯಾವ ಇಲಾಖೆಗೆ ಎಷ್ಟೆಷ್ಟು ಅನುದಾನವನ್ನು ಯಾವ ವರ್ಷದಿಂದ ನೀಡಲಾಗಿದೆ; (ವಿವರ ನೀಡುವುದು) | ಪ್ರಾದೇಶಿಕ ಅಸಮತೋಲನೆ ನಿವಾರಿಸಲು 2007-08 ರಿಂದ 2020-21ನೇ ಸಾಲಿನವರೆಗೆ ಹಿಂದುಳಿದ ತಾಲ್ಲೂಕುಗಳಿಗೆ, 32 ಇಲಾಖೆಗಳಿಗೆ ಅನುದಾನವನ್ನು ನಿಗದಿ ಪಡಿಸಿ ಅನುಷ್ಠಾನಗೊಳಿಸಲಾಗುತ್ತಿದೆ. (ಇಲಾಖಾವಾರು ವಿವರವನ್ನು ಅನುಭಂದ-2ರಲ್ಲಿ ನೀಡಲಾಗಿದೆ) |
| ಈ) | ಇಲ್ಲಿಯವರೆವಿಗೂ ಈ ಅನುದಾನವನ್ನು ಖರ್ಚು ಮಾಡಿರುವ ಎಷ್ಟು ತಾಲ್ಲೂಕುಗಳು ಸಮತೋಲನಕ್ಕೆ ಬಂದಿವೆ; | ದಿನಾಂಕ: 23.11.2017ರಂದು ಬೆಳಗಾವಿ ಅಧಿವೇಶನದ ಮಾನ್ಯ ಮುಖ್ಯಮಂತ್ರಿಗಳು ಘೋಷಿಸಿದಂತೆ, ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರದಿಂದ ಮೌಲ್ಯಮಾಪನ ಮಾಡಿಸಲಾಗಿದ್ದು, ಹಿಂದುಳಿದ, ಅತೀ ಹಿಂದುಳಿದ ಮತ್ತು ಅತ್ಯಂತ ಹಿಂದುಳಿದ ತಾಲ್ಲೂಕುಗಳು ಬದಲವಣೆಯಾಗಿರುವ ವಿವರವನ್ನು ಈ ಕೆಳಕಂಡಂತೆ ಇರುತ್ತದೆ. |

| ತಾಲ್ಲೂಕು | ಕಾಂಪ್ರಿಹೆನ್ಸಿವ್ ಕಂಪೋಸಿಟ್ ಡೆವಲಪಮೆಂಟ್ ಇಂಡೆಕ್ಸ್(CCDI) | ಪ್ರಾ.ಅ.ನಿ.ಉ. ಸಮಿತಿಯ ಪ್ರಕಾರ ತಾಲ್ಲೂಕುಗಳು | ಕಾಂಪ್ರಿಹೆನ್ಸಿವ್ ಕಂಪೋಸಿಟ್ ಡೆವಲಪಮೆಂಟ್ ಇಂಡೆಕ್ಸ್(CCDI) ಪ್ರಕಾರ ಪ್ರಸ್ತುತ ತಾಲ್ಲೂಕುಗಳ ಅಂದಾಜು |
|---|---|---|---|
| ಅತ್ಯಂತ ಹಿಂದುಳಿದ | 0.52-0.79 | 39 | 29 |
| ಅತೀ ಹಿಂದುಳಿದ | 0.80-0.88 | 40 | 24 |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td></td><td></td><td>
<table>
<tr><td>ಹಿಂದುಳಿದ</td><td>0.89–0.99</td><td>35</td><td>43</td></tr>
<tr><td>ಒಟ್ಟು</td><td></td><td>114</td><td>96</td></tr>
<tr><td>ಅಭಿವೃದ್ಧಿ ತಾಲ್ಲೂಕುಗಳು</td><td>1.0 & ಸುಂಚ್ಯಾಕ ಮೀರಿ</td><td>61</td><td>80</td></tr>
<tr><td colspan="2">ಒಟ್ಟು</td><td>175</td><td>176<br>*ಚಿತ್ತೂರು ತಾಲ್ಲೂಕು ಸೃಜಿಸಲಾಗಿದೆ.</td></tr>
</table>
</td></tr>
<tr><td>ಉ)</td><td>ಪ್ರತಿ ವರ್ಷ ಆಯಾಯ ಇಲಾಖೆಗೆ ನೀಡಿರುವ ಅನುದಾನವನ್ನು ಸಮರ್ಪಕವಾಗಿ ಆ ಇಲಾಖೆಯವರು ಖರ್ಚು ಮಾಡಿದ್ದಾರೆಯೇ; ಖರ್ಚು ಮಾಡದಿದ್ದಲ್ಲಿ ಕಾರಣವೇನು; ಆಯಾಯ ಇಲಾಖೆಯಲ್ಲಿ ಉಳಿದ ಅನುದಾನವೆಷ್ಟು;</td><td>ಪ್ರತಿ ವರ್ಷ ಆಯಾಯ ಇಲಾಖೆಗೆ ನೀಡಿರುವ ಅನುದಾನವು ಪೂರ್ಣ ಪ್ರಮಾಣದಲ್ಲಿ ಖರ್ಚು ಮಾಡಿರುತ್ತಾರೆ. (ವಿವರವನ್ನು ಅನುಬಂಧ-3ರಲ್ಲಿ ನೀಡಲಾಗಿದೆ)</td></tr>
<tr><td>ಊ)</td><td>ಖರ್ಚು ಮಾಡದೇ ಉಳಿದ ಅನುದಾನವನ್ನು ಆ ಇಲಾಖೆಯವರು ಮುಂದಿನ ವರ್ಷಕ್ಕೆ ಉಳಿಸಿಕೊಂಡಿದ್ದಾರೆಯೇ ಅಥವಾ ಹಣಕಾಸು ಇಲಾಖೆಗೆ ಹಿಂದಿರುಗಿಸಿದ್ದಾರೆಯೇ;</td><td>ಪ್ರತಿ ವರ್ಷ ಆಯಾಯ ಇಲಾಖೆ ನೀಡಿರುವ ಅನುದಾನವು ಅಪವ್ಯಯವಾಗಿರುತ್ತದೆ(Lapse). ವಿವರವನ್ನು ಅನುಬಂಧ-3ರಲ್ಲಿ ನೀಡಲಾಗಿದೆ.</td></tr>
<tr><td>ಋ)</td><td>ರಾಜ್ಯದ ಅಸಮತೋಲನ ತಾಲ್ಲೂಕುಗಳ ಅಭಿವೃದ್ಧಿಗಾಗಿ ಖರ್ಚು ಮಾಡಿರುವ ಒಟ್ಟು ಮೊತ್ತವೆಷ್ಟು? (ಸಂಪೂರ್ಣ ವಿವರ ನೀಡುವುದು)</td><td>ರಾಜ್ಯದ ಅಸಮತೋಲನ ತಾಲ್ಲೂಕುಗಳ ಅಭಿವೃದ್ಧಿಗಾಗಿ 2007-08ರಿಂದ 2020-21ರವರೆಗೆ ರೂ.38246.85 ಕೋಟಿಗಳು ಹಂಚಿಕೆ, ರೂ.27949.82 ಕೋಟಿಗಳು ಬಿಡುಗಡೆ ಮತ್ತು ರೂ.26259.31 ಕೋಟಿಗಳು ವೆಚ್ಚ ಮಾಡಲಾಗಿದೆ. (ವಿವರವನ್ನು ಅನುಬಂಧ-4 ರಲ್ಲಿ ನೀಡಲಾಗಿದೆ)</td></tr>
</table>

(ಪಿಡಿಎಸ್ 34 ಎಸ್‌ಡಿಪಿ 2020)

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಅನುಬಂಧ–1

ಡಾ॥ ಡಿ.ಎಂ ನಂಜುಂಡಪ್ಪ ವರದಿ ಪ್ರಕಾರ ತಾಲ್ಲೂಕುಗಳ ಅಸಮತೋಲನ ನಿವಾರಣೆಗೆ ವಿವಿಧ ಇಲಾಖೆಗಳಿಂದ ಅಭಿವೃದ್ಧಿಗಾಗಿ ಕೈಗೊಂಡಿರುವ ಕ್ರಮಗಳು:–

| ಕ್ರ ಸಂ. | ಇಲಾಖೆ/ಯೋಜನೆಗಳು |
|---|---|
| **1** | **ಕೃಷಿ** |
| 1 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ–ಆರ್‌ಕೆವಿವೈ |
| 2 | ರೈತ ಸಂಪರ್ಕ ಕೇಂದ್ರ |
| 3 | ಮಣ್ಣಿನ ಸತ್ವ ಹೆಚ್ಚಿಸುವಿಕೆ |
| 4 | ವೇಗವರ್ಧಕ ಅಭಿವೃದ್ಧಿ ಕಾರ್ಯಕ್ರಮ |
| 5 | ಕೃಷಿ ಭಾಗ್ಯ |
| 6 | ಕೃಷಿ ಪರಿಕರಗಳು ಮತ್ತು ಗುಣಮಟ್ಟ ನಿಯಂತ್ರಣ |
| **2** | **ತೋಟಗಾರಿಕೆ** |
| 7 | ತೋಟಗಾರಿಕಾ ವಿಶ್ವವಿದ್ಯಾಲಯ, ಬಾಗಲಕೋಟೆ |
| 8 | ರಾಷ್ಟ್ರೀ ತೋಟಗಾರಿಕೆ ಮಿಷನ್‌ಗೆ ರಾಜ್ಯದ ಪಾಲು |
| 9 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ–ತೋಟಗಾರಿಕೆ |
| 10 | ಪಿಎಂಕೆಎಸ್‌ವೈ - ರಾಷ್ಟ್ರೀಯ ಸುಸ್ಥಿರ ಕೃಷಿ ಅಭಿಯಾನ |
| 11 | ಸಮಗ್ರ ತೋಟಗಾರಿಕಾ ಅಭಿವೃದ್ಧಿ |
| **3** | **ಪಶುಸಂಗೋಪನೆ** |
| 12 | ಮೇವು ಅಭಿವೃದ್ಧಿ |
| 13 | ಜಾನುವಾರು ಮತ್ತು ಎಮ್ಮೆಗಳ ಅಭಿವೃದ್ಧಿ ಕೈಗೆ ಕೇಂದ್ರ |
| 14 | ಕರ್ನಾಟಕ ಹಾಲು ಉತ್ಪದಕರ ಮಹಾಸಂಘ |
| 15 | ಹಾಲು ಉತ್ಪಾದಕರಿಗೆ ಉತ್ತೇಜನ |
| 16 | ಶಿಕ್ಷಣ ವಿಸ್ತರಣೆ ಮತ್ತು ಸಂಶೋಧನೆ - ಕೆವಿಎಎಫ್‌ಎಸ್‌ಯು - ಬೀದರ್ |
| 17 | ಡೈರಿ ವಿಜ್ಞಾನ ಕಾಲೇಜು, ಗುಲ್ಬರ್ಗಾ |
| 18 | ಗುಲ್ಬರ್ಗಾ ಮತ್ತು ಬೀದರ್‌ಗಳಲ್ಲಿ ಹಾಲು ಒಕ್ಕೂಟಗಳು |
| **4** | **ರೇಷ್ಮೆ** |
| 19 | ರೇಷ್ಮೆ ಅಭಿವೃದ್ಧಿಗೆ ಹೊಸ ಉಪಕ್ರಮ |
| **5** | **ಕೃಷಿ ಮಾರುಕಟ್ಟೆ** |
| 20 | ಎ.ಪಿ.ಎಂ.ಸಿ.ಗಳ ವಿಶೇಷ ಯೋಜನೆಗಳಿಗೆ ನೆರವು |
| **6** | **ಮಿನುಗಾರಿಕೆ** |
| 21 | ಹೈನುಗಾರಿಕೆ ವಿಜ್ಞಾನ ಕಾಲೇಜು, ಗುಲ್ಬರ್ಗಾ |

| ಕ್ರ ಸಂ. | ಇಲಾಖೆ/ಯೋಜನೆಗಳು |
|---|---|
| 7 | ಒಳಾಡಳಿತ |
| 22 | ಕೆ.ಎಸ್.ಎಫ್.ಇ |
| **8** | ಸಾರಿಗೆ |
| 23 | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ |
| 24 | ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ನಿಗಮ |
| 25 | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ |
| 26 | ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ನಿಗಮ |
| **9** | **ಲೋಕೋಪಯೋಗಿ** |
| 27 | ಸುವರ್ಣ ರಸ್ತೆ ವಿಕಾಸ ಯೋಜನೆ |
| 28 | ಗ್ರಾಮೀಣ ರಸ್ತೆಗಳು |
| 29 | ರಾಜ್ಯ ಹೆದ್ದಾರಿ ರಸೆ ಕಾಮಗಾರಿಗಳು |
| 30 | ಜಿಲ್ಲಾ ಮತ್ತು ಇತರೆ ರಸ್ತೆಗಳು |
| 31 | ಎಂ.ಡಿ.ಆರ್.ಕಾಮಗಾರಿಗಳು ನಬಾರ್ಡ್ ನೆರವು |
| **10** | **ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್** |
| 32 | ಗ್ರಾಮೀಣ ನೀರು ಸರಬರಾಜು–ವಿಅಕಾ |
| 33 | ಜಿಲ್ಲಾ ಪಂಚಾಯತ್ ಕೆರೆಗಳ ಪೂರ್ವಸ್ಥಿತಿ ಹಾಗೂ ಪುನಶ್ಚೇತನ–ವಿಅಕಾ |
| 34 | ಡಾ.ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕುಗಳಲ್ಲಿ ರಸ್ತೆ ಕಾಮಗಾರಿಗಳು |
| 35 | ಕರ್ನಾಟಕ ಪಂಚಾಯತಿ ಬಲವರ್ಧನೆ ಯೋಜನೆ (ಗ್ರಾಮ ಸ್ವರಾಜ್)–ಇ.ಎ.ಪಿ |
| 36 | ಹಿಂದುಳಿದ ತಾಲ್ಲೂಕುಗಳಿಗೆ ವಿಶೇಷ ಕಾಮಗಾರಿ |
| 37 | ಗ್ರಾಮೀಣ ಪ್ರದೇಶಗಳಲ್ಲಿ ರಸ್ತೆ ಕಾಮಗಾರಿಗಳು |
| 38 | ಗ್ರಾಮೀಣ ಪ್ರದೇಶಗಳಲ್ಲಿ ರಸ್ತೆ ಕಾಮಾಗಾರಿ–ನಬರ್ಡ್ |
| 39 | ಸಿ.ಎಂ.ಜಿ.ಎಸ್.ವೈ |
| **11** | **ವಸತಿ** |
| 40 | ದುರ್ಬಲ ವರ್ಗದವರಿಗಾಗಿ ವಸತಿ |
| 41 | ಭೂರಹಿತರಿಗೆ ವಸತಿ ನಿವೇಶನಗಳು |
| 42 | ಆಶ್ರಯ–ವಿಅಕಾ |
| 43 | ಇಂದಿರಾ ಅವಾಸ್ ಯೋಜನೆ–ರಾಜ್ಯ ಪಾಲು |
| 44 | ಆಶ್ರಯ ಯೋಜನೆಗಾಗಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ (ನಿ)ಕ್ಕೆ ಸಾಲ |
| 45 | ಗ್ರಾಮೀಣ ವಸತಿ |
| 46 | ವಾಜಪೇಯಿ ನಗರ ವಸತಿ ಯೋಜನೆ |

| ಕ್ರ ಸಂ. | ಇಲಾಖೆ/ಯೋಜನೆಗಳು |
|---|---|
| **12** | ಜಲ ಸಂಪನ್ಮೂಲ |
| 47 | ಕೃಷ್ಣ–ಭಾಗ್ಯ ಜಲ ನಿಗಮ ನಿಯಮಿತ |
| 48 | ಕರ್ನಾಟಕ ನೀರಾವರಿ ನಿಗಮ ನಿಯಮಿತ |
| 49 | ವಿಶ್ವೇಶ್ವರಯ್ಯ ಜಲ ನಿಗಮ ನಿಯಮಿತ |
| 50 | ಒಟ್ಟಾರೆ ಹೊಸ ಕಾಮಗಾರಿಗಳು |
| 51 | ಕಾಡಾ–ವಿಶೇಷ ಅಭಿವೃದ್ಧಿ ಕಾರ್ಯಕ್ರಮ |
| **13** | ಸಣ್ಣ ನೀರವಾರಿ |
| 52 | ಹೊಸ ಕಾಮಗಾರಿಗಳಿಗೆ ಇಡಿಗಂಟು. |
| **14** | ಇಂಧನ |
| 53 | ವಿದ್ಯುಚ್ಛಕ್ತಿ ಬಳಕೆಯಲ್ಲಿ ಹೂಡಿಕೆ |
| 54 | ನಿರಂತರ ಜ್ಯೋತಿ ಕಾರ್ಯಗಳಿಗಾಗಿ ಎಸ್ಕಾಂಗಳಿಗೆ ಬಂಡವಾಳ |
| **15** | **ವಾಣಿಜ್ಯ ಮತ್ತು ಕೈಗಾರಿಕೆ** |
| 55 | ಹೊಸ ಔದ್ಯಮಿಕ ಸಮೂಹಗಳ ಸ್ಥಾಪನ |
| 56 | ನೇಕಾರರಿಗೆ ಪ್ಯಾಕೇಜ್ |
| 57 | ನೇಕಾರರ ಪ್ಯಾಕೇಜ್–ಕೆ.ಹೆಚ್.ಡಿ.ಸಿ |
| 58 | ವೇಗವರ್ಧನಕಾರಿ ಅಭಿವೃದ್ಧಿ ಕಾರ್ಯಕ್ರಮ |
| **16** | **ಮೂಲಭೂತ ಸೌಕರ್ಯ** |
| 59 | ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ |
| 60 | ಹೊಸ ಯೋಜನೆಗಳ ವೆಚ್ಚ ಹಂಚಿಕೆ |
| 61 | ವೆಚ್ಚ ಹಂಚಿಕೆ – ಬೀದರ್–ಗುಲ್ಬರ್ಗ ಹೊಸ ರೈಲು ಮಾರ್ಗ–ಎಸ್‌ಡಿಪಿ |
| 62 | ಹೊಸ ಯೋಜನೆಗಳ ವೆಚ್ಚ ಹಂಚಿಕೆ |
| **17** | **ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ** |
| 63 | 39 ಅತ್ಯಂತ ಹಿಂದುಳಿದ ತಾಲ್ಲೂಕುಗಳಲ್ಲಿ ಮೇಲ್ದರ್ಜೆಗೇರಿಸಿದ ಪ್ರಾ.ಆ.ಕೇಂ.ಗಳಿಗೆ ಯಂತ್ರೋಪಕರಣಗಳ ಖರೀದಿ |
| 64 | ಕರ್ನಾಟಕ ರಾಜ್ಯ ಡ್ರಗ್, ಲಾಜಿಸ್ಟಿಕ್ ಮತ್ತು ವೇರಹೌಸಿಂಗ್ ಸೊಸೈಟಿ |
| 65 | ಸುವರ್ಣ ಆರೋಗ್ಯ ಸುರಕ್ಷಾ |
| 66 | ಸುಟ್ಟ ಗಾಯ ಮತ್ತು ಡಯಾಲಿಸಿಸ್ ವಾರ್ಡ್ ಪ್ರಾರಂಭ–ವಿಅಕಾ |
| 67 | ರಾಷ್ಟ್ರೀಯ ಆರೋಗ್ಯ ಅಭಿಯಾನ (ರಾ.ಆ.ಅ) |
| 68 | ಆರೋಗ್ಯ ಕರ್ನಾಟಕ |
| 69 | ಆಸ್ಪತ್ರೆ ನಿರ್ಮಾಣ/ಉನ್ನತೀಕರಣ |
| 70 | ಹೊಸ ವೈದ್ಯಕೀಯ ಕಾಲೇಜುಗಳ ಸ್ಥಾಪನೆ 2013–14 |

| ಕ್ರ ಸಂ. | ಇಲಾಖೆ/ಯೋಜನೆಗಳು |
|---|---|
| 71 | ಜಿಲ್ಲಾ ಆಸ್ಪತ್ರೆಗಳು – ಗುಲ್ಬರ್ಗಾ ಮತ್ತು ಚಾಮರಾಜನಗರ |
| **18** | **ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ** |
| 72 | ಪಂಚ ಸೌಲಭ್ಯ |
| 73 | ಹೆಣ್ಣುಮಕ್ಕಳಿಗಾಗಿ ಶಾಲೆಯ ಪ್ರಾರಂಭ–ಕೆಜಿಬಿವಿ ಮಾದರಿ–ಎಸ್‌ಡಿಪಿ |
| 74 | 39 ಹಿಂದುಳಿದ ತಾಲ್ಲೂಕುಗಳಲ್ಲಿ ಸಮೂಹ ಸಂಕೀರ್ಣ |
| 75 | ಕಾಂಪೌಂಡ್ ಮತ್ತು ಆಟದ ಮೈದಾನ |
| 76 | ಪೌಢಶಾಲೆಗಳಿಗೆ ಮೂಲಭೂತ ಸೌಲಭ್ಯ–ಎಸ್‌ಡಿಪಿ |
| 77 | ಪ್ರೌಢಶಾಲೆಗಳ ಕಟ್ಟಡ ನಿರ್ಮಾಣ ಸುಧಾರಣೆ(ನಬಾರ್ಡ್) |
| 78 | ಶಾಲೆಯ ಸೌಲಭ್ಯ ನಿರ್ವಹಣೆ |
| 79 | ರಾಜ್ಯ ಉಪಕ್ರಮಗಳಡಿಯಲ್ಲಿ ಸರ್ವಶಿಕ್ಷಣ ಅಭಿಯಾಣ ಸಮಾಜ |
| 80 | ಪದವಿ ಪೂರ್ವ ಪರೀಕ್ಷೆ |
| 81 | ಪ್ರೌಢಶಾಲೆಗಳ ಕಟ್ಟಡ ನಿರ್ಮಾಣ ಸುಧಾರಣೆ (ನಬಾರ್ಡ್–ಎಸ್‌ಡಿಪಿ) |
| 82 | ವಿಧ್ಯಾ ವಿಕಾಸ ಯೋಜನೆ |
| 83 | ಸರ್ವಶಿಕ್ಷಣ ಅಭಿಯಾನ ಸೊಸೈಟಿ |
| 84 | 13–ಹಆಅ–ಪ್ರಾಥಮಿಕ ಶಿಕ್ಷಣ – (ಎಸ್‌ಎಸ್‌ಎ) |
| 85 | 8ನೇ ತರಗತಿಯ ವಿದ್ಯಾರ್ಥಿಗಳಿಗೆ ಬೈಸಿಕಲ್ |
| 86 | ಹೆಣ್ಣು ಮಕ್ಕಳಿಗಾಗಿ ಶಾಲೆಯ ಆರಂಭ – ಕೆಜಿಬಿವಿ ಮಾದರಿ–ಎಸ್.ಡಿ.ಪಿ |
| 87 | ಕಂಪ್ಯೂಟರ್ ಕಲಿಕೆ ಸೆಕೆಂಡರಿ ಶಾಲೆಗಳಲ್ಲಿ |
| 88 | ಬಾಲಕಿಯರಿಗಾಗಿ ಶಾಲೆಗಳನ್ನು ತೆರೆಯುವುದು–ಕೆಜಿಬಿವಿ ಮಾಡಲ್ ಎಸ್ ಡಿ ಪಿಗಳು |
| 89 | ಮಾಧ್ಯಮಿಕ ಶಾಲೆಗಳಲ್ಲಿ ಕಂಪ್ಯೂಟರ್ ಸಾಕ್ಷರತೆ ಜಾಗೃತಿ |
| 90 | ರಾಷ್ಟೀಯ ಉಚ್ಚತರ ಶಿಕ್ಷಾ ಅಭಿಯಾನ |
| 91 | ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ |
| 92 | ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ(ಆರ್ ಎಮ್ ಎಸ್ ಎ) |
| 93 | ಮಾಧ್ಯಮಿಕ ಶಾಲೆಗಲ್ಲಿ ಕಂಪ್ಯೂಟರ್ ಸಾಕ್ಷರತೆ ಜಾಗೃತಿ |
| **19** | **ಉನ್ನತ ಶಿಕ್ಷಣ** |
| 94 | ಪ್ರಥಮ ದರ್ಜೆ ಮಹಾವಿದ್ಯಾಲಯ ಕಟ್ಟಡಗಳು |
| **20** | **ಕಾರ್ಮಿಕ** |
| 95 | 10 ತಾಲ್ಲೂಕುಗಳಲ್ಲಿ ನೂತನ ಔದ್ಯೋಗಿಕ ತರಬೇತಿ ಸಂಸ್ಥೆ |
| 96 | ಮಾಡ್ಯುಲರ ತರಬೇತಿ |
| 97 | ಕರ್ನಾಟಕ–ಜರ್ಮನಿ ಬಹು ಕೌಶಲ್ಯ ಅಭಿವೃದ್ಧಿ ಕೇಂದ್ರ |

| ಕ್ರ ಸಂ. | ಇಲಾಖೆ/ಯೋಜನೆಗಳು |
|---|---|
| 98 | ಐಟಿಐ ಕಟ್ಟಡಗಳ ನಿರ್ಮಾಣ – ಆರ್‌ಐಡಿಎಫ್ |
| 99 | ಉದ್ಯೋಗ್ಯ ಮತ್ತು ತರಬೇತಿ ಇಲಾಖೆಯ ನಿರ್ದೇಶಕರು |
| 100 | ವಿಶಿಷ್ಟ ಕೌಶಲ್ಯ ಅಭಿವೃದ್ಧಿ ಸಂಸ್ಥೆಗಳು |
| 101 | ಹೊಸ ಖಾಸಗಿ ಔದ್ಯೋಗಿಕ ತರಬೇತಿ ಸಂಸ್ಥೆ |
| 102 | ಔದ್ಯೋಗಿಕ ತರಬೇತಿ ಸಂಸ್ಥೆಗಳ ನಿರ್ಮಾಣ |
| **21** | **ಸಮಾಜ ಕಲ್ಯಾಣ** |
| 101 | ವಿಶೇಷ ಘಟಕ ಯೋಜನೆ–ಒಟ್ಟುಗೂಡಿಸಿದ ಮೊತ್ತ |
| 102 | ಗಿರಿಜನ ಉಪ ಯೋಜನೆ – ಒಟ್ಟುಗೂಡಿಸಿದ ಮೊತ್ತ |
| **22** | **ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ** |
| 103 | ಸ್ತ್ರೀಶಕ್ತಿ ಗುಂಪಿಗಾಗಿ ಕುಶಲ ಅಭಿವೃದ್ಧಿ – ಎಸ್‌ಡಿಪಿ |
| 104 | ಎಸ್‌ಎಚ್‌ಜಿಗಾಗಿ ವಿಭಾಗ ಮಟ್ಟದಲ್ಲಿ ತರಭೇತಿ ಕೇಂದ್ರ–ಎಸ್‌ಡಿಪಿ |
| 105 | ಅಂಗನವಾಡಿ ಕಟ್ಟಡಗಳು – ವಿಅಕಾ |
| 106 | ದೇವದಾಸಿಯರಿಗಾಗಿ ವಸತಿ ನಿರ್ಮಾಣ–ಎಸ್‌ಡಿಪಿ |
| 107 | ಸ್ತ್ರೀಶಕ್ತಿ ಗೊಂಚಲುಗಳ ಮತ್ತು ಬ್ಲಾಕ್ ಸೊಸೈಟಿಗಳ ಸಬಲೀಕರಣ |
| 108 | ಭಾಗ್ಯಲಕ್ಷ್ಮಿ |
| **23** | **ಪ್ರವಾಸೋದ್ಯಮ** |
| 109 | ಟೂರಿಸ್ಟ್‌ಬ್ಯೂರೋ |
| 110 | ಪ್ರವಾಸಿಗರ ಮಾಹಿತಿ ಕೇಂದ್ರ |
| 111 | ಪ್ರವಾಸಿ ತಾಣಗಳಿಗೆ ರಸ್ತೆ |
| 112 | ವಿವಿಧ ಸ್ಥಳಗಳಲ್ಲಿ ಪ್ರವಾಸೋದ್ಯವ ಮೂಲಭೂತ ಸೌಕರ್ಯ |
| **24** | **ಅಲ್ಪ ಸಂಖ್ಯಾತರ ಇಲಾಖೆ** |
| 113 | ಅಲ್ಪ ಸಂಖ್ಯಾತರ ಹಾಸ್ಟೆಲ್‌ಗಳ ಕಟ್ಟಡಗಳ ನಿರ್ಮಾಣ |
| **25** | **ಮಾಹಿತಿ ಮತ್ತು ತಂತ್ರಜ್ಞಾನ** |
| 114 | ಮಾ.ತಂ.ಪ್ರಮೋಷನ್ & ಅಭಿವೃದ್ಧಿ |
| 115 | ಮಾಹಿತಿ & ಸಂಪರ್ಕ ತಂತ್ರಜ್ಞಾನ (ಮಾಸಂನಿ) ನಿಯಮ |
| 116 | 2ನೇ ಹಂತದ ನಗರಗಳಿಗೆ ಕಿಯೋನಿಕ್ಸ್ ನಿಂದ ಈಕ್ವಟಿ–ಮಾ.ತಂ. ಅಭಿವೃದ್ಧಿ |
| 117 | ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯ |
| 118 | ಜಿಲ್ಲಾ ವಿಜ್ಞಾನ ಕೇಂದ್ರಗಳು |
| 119 | ವಿಜ್ಞಾನ ಮತ್ತು ತಂತ್ರಜ್ಞಾನ ಆಯೋಗ |
| 120 | ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಸುಧಾರಣೆ ಕರ್ನಾಟಕ ನಿಧಿ (ಕೆ ಫಿಸ್ಟ್) |

| ಕ್ರ. ಸಂ. | ಇಲಾಖೆ/ಯೋಜನೆಗಳು |
|---|---|
| 121 | ಮಾಹಿತಿ ಸಂವಹನ ತಂತ್ರಜ್ಞಾನ (ಐಸಿಟಿ) ನೀತಿ |
| **26** | **ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ** |
| 122 | ಸಾಮಜಿಕ ಅರಣ್ಯ |
| **27** | **ಜಲನಾಯನ** |
| 123 | ಮಣ್ಣು ಮತ್ತು ನೀರು ಸಂರಕ್ಷಣೆ |
| 124 | ಜಲಸಿರಿ |
| 125 | ಜಲಾನಯನ ತರಬೇತಿ ಕೇಂದ್ರ |
| 126 | ಸಮಗ್ರ ಜಲಾನಯನ ನಿರ್ವಹಣಾ |
| **28** | **ನಗರಾಭಿವೃಧ್ಧಿ** |
| 127 | ಕರ್ನಾಟಕ ನಗರ ಜಲ ವಿಭಾಗ ಸುಧಾರಣೆ ಯೋಜನೆ–ಇ.ಪಿ.ಪಿ |
| 128 | ಕರ್ನಾಟಕ ಪೌರ ಸುಧಾರಣಾ ಯೋಜನೆ – ಇ.ಎ.ಪಿ |
| 129 | ಉತ್ತರ ಕರ್ನಾಟಕ ನಗರ ವಿಭಾಗ ಹೂಡಿಕೆ ಕಾರ್ಯಕ್ರಮ ಇ.ಎ.ಪಿ |
| **29** | **ಸಹಾಕರ** |
| 130 | ಎ.ಪಿ.ಎಂ.ಸಿ.ಗಳ ವಿಶೇಷ ಯೋಜನೆಗಳಿಗೆ ನೆರವು |
| **30** | **ಕೌಶಲ್ಯ ಅಭಿವೃಧ್ಧಿ ಇಲಾಖೆ** |
| 131 | ವಿಶೇಷ ಕೌಶಲ್ಯ ಅಭಿವೃಧ್ಧಿ ಸಂಸ್ಥೆಗಳು |
| 132 | ವಿಶೇಷ ಶ್ರಮಿಕ ಅಭಿವೃಧ್ಧಿ ಸಂಸ್ಥೆಗಳು |
| **31** | **ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ** |
| 133 | ಹಾಸ್ಟೆಲ್ ಕಟ್ಟಡಗಳ ನಿರ್ಮಾಣ |
| **32** | **ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ** |
| 134 | ಅನುಚ್ಛೇದ 371ಜೆ – ಹೈದಾರಬಾದ್ ಕರ್ನಾಟಕ ಪ್ರದೇಶಾಭಿವೃಧ್ಧಿ |

(ಚುಕ್ಕೆ ಗುರುತಿಲ್ಲದ ಪ್ರಶ್ನೆ 1781ಕ್ಕೆ ಉತ್ತರ)

2007–08ನೆ ಸಾಲಿನಿಂದ 2020–21ನೇ ವರೆಗೆ ವಿಶೇಷ ಅಭಿವೃಧ್ಧಿ ಯೋಜನೆಯಡಿ 32 ಅನುಷ್ಠಾನ ಇಲಾಖೆಗಳಲ್ಲಿನ ವಿವಿಧ 134 ಅಭಿವೃದ್ಧಿ ಯೋಜನೆಗಳಿಗೆ/ ಕಾರ್ಯಕ್ರಮಗಳಿಗೆ ಅನುದಾನವನ್ನು ನಿಗದಿಪಡಿಸಿ ಅನುಷ್ಠಾನಗೊಳಿಸಿ ಕ್ರಮಕೈಗೊಳ್ಳಲಾಗಿದೆ.

## ಅನುಬಂಧ-2

## ವಿಶೇಷ ಅಭಿವೃದ್ಧಿ ಯೋಜನೆಯಡಿ 2007-08 ರಿಂದ 2020-21ನೇ ವರ್ಷದವರೆಗೆ ಆಯವ್ಯಯದಲ್ಲಿ ನಿಗದಿಪಡಿಸಿರುವ ಅನುದಾನ

ರೂ.ಲಕ್ಷಗಳಲ್ಲಿ

| ಕ್ರ. ಸಂ. | ಇಲಾಖೆಗಳು | 2007-08 | 2008-09 | 2009-10 | 2010-11 | 2011-12 | 2012-13 | 2013-14 |
|---|---|---|---|---|---|---|---|---|
| 1 | ಕೃಷಿ | 11000.00 | 7925.60 | 7000.00 | 5122.00 | 2900.00 | 4500.00 | 7500.00 |
| 2 | ತೋಟಗಾರಿಕೆ | 1400.00 | 5400.00 | 5500.00 | 10666.00 | 11500.00 | 8300.00 | 1500.00 |
| 3 | ಪಶುಸಂಗೋಪನೆ | 4000.00 | 6600.00 | 1369.00 | 1400.00 | 1400.00 | 1200.00 | |
| 4 | ರೇಷ್ಮೆ | | | | | | | |
| 5 | ಕೃಷಿ ಮಾರುಕಟ್ಟೆ | | | | | | | |
| 6 | ಮಿನುಗಾರಿಕೆ | | | | | | | |
| 7 | ಒಳಾಡಳಿತ | | 3500.00 | | 2320.00 | 2000.00 | 2000.00 | 1500.00 |
| 8 | ಸಾರಿಗೆ | 10000.00 | 10000.00 | 7500.00 | 7500.00 | 7500.00 | 6000.00 | 4500.00 |
| 9 | ಲೋಕೋಪಯೋಗಿ | 12500.00 | | 23000.00 | 20500.00 | 18000.00 | 18000.00 | 15000.00 |
| 10 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ | 25000.00 | 66214.36 | 49744.04 | 43221.25 | 40216.00 | 31444.00 | 29200.00 |
| 11 | ವಸತಿ | 10000.00 | 38119.00 | 33700.00 | 32858.00 | 40918.00 | 32056.00 | 24600.00 |
| 12 | ಜಲ ಸಂಪನ್ಮೂಲ | 30000.00 | 35000.00 | 28500.00 | 37882.75 | 52500.00 | 54000.00 | 68000.00 |
| 13 | ಸಣ್ಣ ನೀರಾವರಿ | | 5000.00 | 5000.00 | | | 5000.00 | 4000.00 |
| 14 | ಇಂಧನ | 25000.00 | 20000.00 | 20000.00 | 10000.00 | 9000.00 | 15000.00 | 17260.00 |
| 15 | ವಾಣಿಜ್ಯ ಮತ್ತು ಕೈಗಾರಿಕೆ | 5500.00 | 3070.00 | 0.00 | 1000.00 | 5200.00 | 5100.00 | 4500.00 |
| 16 | ಮೂಲಭೂತ ಸೌಕರ್ಯ | 4750.00 | 14300.00 | 11000.00 | 14250.00 | 21909.56 | 19000.00 | 21800.00 |
| 17 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | 2000.00 | 7501.00 | 10147.00 | 10000.00 | 4500.00 | 6000.00 | 7000.00 |
| 18 | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ | 10000.00 | 14968.66 | 15823.71 | 11900.00 | 17000.00 | 23500.00 | 21300.00 |
| 19 | ಉನ್ನತ ಶಿಕ್ಷಣ | | | | | | | |
| 20 | ಕಾರ್ಮಿಕ | 1000.00 | 1330.58 | 4000.00 | 4000.00 | 4110.00 | 3500.00 | 3000.00 |
| 21 | ಸಮಾಜ ಕಲ್ಯಾಣ | 5000.00 | 10730.00 | 20000.22 | 25000.00 | 32000.00 | | |
| 22 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | | 3000.00 | 6200.00 | 5980.00 | 6900.00 | 6400.00 | 6400.00 |
| 23 | ಪ್ರವಾಸೋದ್ಯಮ | | | 2000.00 | 2000.00 | 8010.00 | 10000.00 | 12000.00 |
| 24 | ಅಲ್ಪ ಸಂಖ್ಯಾತರ ಇಲಾಖೆ | | | | | | 6000.00 | 4000.00 |
| 25 | ಮಾಹಿತಿ ಮತ್ತು ತಂತ್ರಜ್ಞಾನ | | | | | | 2000.00 | 2000.00 |
| 26 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | | 2074.76 | 2000.00 | 2000.00 | 2000.00 | | |
| 27 | ಜಲಸಾರಿಗೆ | | | 5399.00 | | | 4000.00 | 2500.00 |
| 28 | ನಗರಾಭಿವೃದ್ಧಿ | | | | 10800.00 | 10000.00 | 5000.00 | 35000.00 |
| 29 | ಸಹಕಾರ | | | | | | | |
| 30 | ಕೌಶಲ್ಯ ಅಭಿವೃದ್ಧಿ ಇಲಾಖೆ | | | | | | | |
| 31 | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | | | | | | | |
| 32 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ | | | | | | | |
| | ಒಟ್ಟು | **157150.00** | **254733.96** | **257882.97** | **258400.00** | **297563.56** | **268000.00** | **292560.00** |

ಅನುಬಂಧ-2

## ವಿಶೇಷ ಅಭಿವೃದ್ಧಿ ಯೋಜನೆಯಡಿ 2007-08 ರಿಂದ 2020-21ನೇ ವರ್ಷದವರೆಗೆ ಆಯವ್ಯಯದಲ್ಲಿ ನಿಗದಿಪಡಿಸಿರುವ ಅನುದಾನ

ರೂ.ಲಕ್ಷಗಳಲ್ಲಿ

| ಕ್ರ ಸಂ. | ಇಲಾಖೆಗಳು | 2014-15 | 2015-16 | 2016-17 | 2017-18 | 2018-19 | 2019-20 | 2020-21 (ಪರಿಷ್ಕೃತ ಆಯಾವ್ಯಯ) | ಒಟ್ಟು |
|---|---|---|---|---|---|---|---|---|---|
| 1 | ಕೃಷಿ | 3720.00 | 20000.00 | 20000.00 | 8800.00 | 15291.00 | 10820.00 | | 124578.60 |
| 2 | ತೋಟಗಾರಿಕೆ | 900.00 | | | 1200.00 | 4816.00 | 4979.00 | 3443.00 | 59604.00 |
| 3 | ಪಶುಸಂಗೋಪನೆ | | | | | | | | 15969.00 |
| 4 | ರೇಷ್ಮೆ | | | | | | | | 0.00 |
| 5 | ಕೃಷಿ ಮಾರುಕಟ್ಟೆ | | | | | | | | 0.00 |
| 6 | ಮಿನುಗಾರಿಕೆ | | | | | | | | 0.00 |
| 7 | ಒಳಾಡಳಿತ | 900.00 | 1500.00 | 1500.00 | 1500.00 | | 140.00 | 314.00 | 17174.00 |
| 8 | ಸಾರಿಗೆ | 3300.00 | 4500.00 | 10000.00 | 16500.00 | 15000.00 | 14727.00 | 6298.00 | 123325.00 |
| 9 | ಲೋಕೋಪಯೋಗಿ | 6960.00 | 5000.00 | 24500.00 | 30000.00 | 30267.00 | 37070.00 | 21784.70 | 262581.70 |
| 10 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ | 9680.00 | 47001.00 | 60000.00 | 63500.00 | 56698.00 | 62592.00 | 51973.00 | 636483.65 |
| 11 | ವಸತಿ | 5400.00 | 30000.00 | 40000.00 | 38000.00 | 19453.00 | 18007.00 | 15000.00 | 378111.00 |
| 12 | ಜಲ ಸಂಪನ್ಮೂಲ | 29300.00 | 42500.00 | 45000.00 | 53500.00 | 56918.00 | 60115.00 | 85607.20 | 678822.95 |
| 13 | ಸಣ್ಣ ನೀರವಾರಿ | | 10000.00 | 12000.00 | 5000.00 | | 5000.00 | 3500.00 | 54500.00 |
| 14 | ಇಂಧನ | 8898.00 | 10000.00 | 10000.00 | 15000.00 | 14013.00 | 19137.00 | 14678.00 | 207986.00 |
| 15 | ವಾಣಿಜ್ಯ ಮತ್ತು ಕೈಗಾರಿಕೆ | 2100.00 | 3001.00 | 3000.00 | 1800.00 | | | | 34271.00 |
| 16 | ಮೂಲಭೂತ ಸೌಕರ್ಯ | 7200.00 | 15000.00 | 18000.00 | 11000.00 | 8737.00 | 3551.00 | 2485.70 | 172983.26 |
| 17 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | 4150.00 | 17000.00 | 13500.00 | 18300.00 | 26153.00 | 29455.00 | 18505.00 | 174211.00 |
| 18 | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ | 11160.00 | 5300.00 | 12000.00 | 6200.00 | 3459.00 | 8846.00 | 2830.00 | 164287.37 |
| 19 | ಉನ್ನತ ಶಿಕ್ಷಣ | | 4500.00 | 5000.00 | 10000.00 | 7000.00 | 5389.00 | 3597.00 | 35486.00 |
| 20 | ಕಾರ್ಮಿಕ | 1320.00 | 5000.00 | 3000.00 | 3400.00 | | | | 33660.58 |
| 21 | ಸಮಾಜ ಕಲ್ಯಾಣ | | | | | | | | 92730.22 |
| 22 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | 2160.00 | 500.00 | 500.00 | 3600.00 | 3600.00 | 3600.00 | 2000.00 | 50840.00 |
| 23 | ಪ್ರವಾಸೋದ್ಯಮ | 5040.00 | 8400.00 | 12500.00 | | | | | 59950.00 |
| 24 | ಅಲ್ಪ ಸಂಖ್ಯಾತರ ಇಲಾಖೆ | | | | | 5000.00 | 5000.00 | 5000.00 | 25000.00 |
| 25 | ಮಾಹಿತಿ ಮತ್ತು ತಂತ್ರಜ್ಞಾನ | 840.00 | 800.00 | 1500.00 | 700.00 | | | | 7840.00 |
| 26 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | | | | | | | | 8074.76 |
| 27 | ಜಲನಾಯನ | 20.00 | | | | | | | 11919.00 |
| 28 | ನಗರಾಭಿವೃದ್ಧಿ | 19800.00 | | | | | | | 80600.00 |
| 29 | ಸಹಾಕರ | | | | 1000.00 | 760.00 | 556.00 | | 2316.00 |
| 30 | ಕೌಶಲ್ಯ ಅಭಿವೃದ್ಧಿ ಇಲಾಖೆ | | | | 3000.00 | 3722.00 | 3722.00 | 4314.00 | 14758.00 |
| 31 | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | | | 8000.00 | 8000.00 | 8032.00 | 8296.00 | 1.00 | 32329.00 |
| 32 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ | | | | | 21781.00 | | | 21781.00 |
| | ಒಟ್ಟು | 122848.00 | 230002.00 | 300000.00 | 300000.00 | 300700.00 | 301002.00 | 241330.60 | 3582173.09 |

## ಅನುಬಂಧ-3

## ವಿಶೇಷ ಅಭಿವೃದ್ಧಿ ಯೋಜನೆಯಡಿ ಅನುದಾನ ನಿಗದಿ ಪಡಿಸಿರುವ ಪ್ರಸ್ತುತ ಇಲಾಖೆಗಳು

| ಕ್ರ. ಸಂ. | ಇಲಾಖೆಗಳು | ಪ್ರತಿ ವರ್ಷ ಆಯಾಯ ಇಲಾಖೆಗೆ ನೀಡಿರುವ ಅನುದಾನವನ್ನು ಸಮರ್ಪಕವಾಗಿ ಆ ಇಲಾಖೆಯವರು ಖರ್ಚು ಮಾಡಿದ್ದಾರೆಯೇ; ಖರ್ಚು ಮಾಡದಿದ್ದಲ್ಲಿ ಕಾರಣವೇನು; ಆಯಾಯ ಇಲಾಖೆಯಲ್ಲಿ ಉಳಿದ ಅನುದಾನವೆಷ್ಟು; | ಖರ್ಚು ಮಾಡದೇ ಉಳಿದ ಅನುದಾನವನ್ನು ಆ ಇಲಾಖೆಯವರು ಮುಂದಿನ ವರ್ಷಕ್ಕೆ ಉಳಿಸಿಕೊಂಡಿದ್ದಾರೆಯೇ ಅಥವಾ ಹಣಕಾಸು ಇಲಾಖೆಗೆ ಹಿಂದಿರುಗಿಸಿದ್ದಾರೆಯೇ; |
|---|---|---|---|
| 1 | ಕೃಷಿ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗುತ್ತಿದ್ದು, 2017-18ನೇ ಸಾಲಿನಲ್ಲಿ ಅನುದಾನವನ್ನು 250 ಕೃಷಿ ಯಂತ್ರೋಪಕರಣಗಳ ಸೇವಾ ಕೇಂದ್ರಗಳ ಸ್ಥಾಪನೆಗೆ ಬಿಡುಗಡೆಗೊಂಡಿರುತ್ತದೆ. ಅದರೆ ಸದರಿ ಸಾಲಿನಲ್ಲಿ 95 ಕೇಂದ್ರಗಳ ಸ್ಥಾಪನೆಗೆ ಅರ್ಜಿಗಳು ಸ್ವೀಕೃತಗೊಂಡಿದ್ದರಿಂದ ಅನುದಾನವು ಉಳಿಕೆಯಾಗಿರುತ್ತದೆ. | ಉಳಿಕೆಯಾದ ಅನುದಾನವನ್ನು ಹಣಕಾಸು ಇಲಾಖೆಯಿಂದ ಹಿಂಪಡೆಯಲಾಗಿರುತ್ತದೆ. |
| 2 | ತೋಟಗಾರಿಕೆ | ವಿಶೇಷ ಅಭಿವೃದ್ಧಿ ಯೋಜನೆಯಡಿ 2007-08ನೇ ಸಾಲಿನಿಂದ 2020-21ನೇ ಸಾಲಿನ ಸೆಪ್ಟೆಂಬರ್ ಮಾಹೆಯವರೆಗೆ ರೂ.38909.55 ಲಕ್ಷಗಳ ಅನುದಾನ ಬಿಡುಗಡೆಯಾಗಿದ್ದು, ರೂ.37214.42 ಲಕ್ಷಗಳ ಅನುದಾನ ವೆಚ್ಚವಾಗಿರುತ್ತದೆ. | ವರ್ಷಾವಾರು ಉಳಿದ ಮೊತ್ತವು ಅಪವ್ಯಯವಾಗಿರುತ್ತದೆ.(Lapse) |
| 3 | ಒಳಾಡಳಿತ | ಪ್ರತಿ ವರ್ಷ ಕರ್ನಾಟಕ ರಾಜ್ಯ ಅಗ್ನಿಶಾಮಕ ಮತ್ತು ತುರ್ತು ಸೇವೆಗಳ ಇಲಾಖೆಗೆ ಒದಗಿಸಿರುವ ಅನುದಾನದಿಂದ ಅಗ್ನಿಶಾಮಕ ಠಾಣೆ ಮತ್ತು ವಸತಿಗೃಹಗಳನ್ನು ನಿರ್ಮಾಣ ಮಾಡಲು ಕರ್ನಾಟಕ ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ನಿಗಮ ನಿಯಮಿತ ಇವರಲ್ಲಿ ಠೇವಣಿ ಇಡಲಾಗಿದೆ. ಯಾವುದೇ ಅನುದಾನ ಉಳಿಕೆಯಾಗಿರುವುದಿಲ್ಲ. | ಉದ್ಭವಿಸುವುದಿಲ್ಲ. |
| 4 | ಸಾರಿಗೆ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗಿದೆ. | ಉದ್ಭವಿಸುವುದಿಲ್ಲ. |
| 5 | ಲೋಕೋಪಯೋಗಿ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗಿದೆ. | ಉದ್ಭವಿಸುವುದಿಲ್ಲ. |
| 6 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ | ಗ್ರಾಮೀಣ ಕುಡಿಯುವ ನೀರು :- ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗುತ್ತಿದ್ದು, ಕೆಲವು ಕಾಮಗಾರಿಗಳು ಪೂರ್ಣಗೊಳ್ಳದ ಕಾರಣ | ಗ್ರಾಮೀಣ ಕುಡಿಯುವ ನೀರು :- ವೆಚ್ಚವಾಗದೇ ಉಳಿದ ಅನುದಾನವನ್ನು ಮುಂದಿನ ವರ್ಷಕ್ಕೆ ಉಳಿಸಿಕೊಳ್ಳಲಾಗಿದೆ. 2019-20ನೇ ಸಾಲಿನಲ್ಲಿ ವಿಶೇಷ ಅಭಿವೃದ್ಧಿ ಯೋಜನೆಯಡಿ |

| ಕ್ರ ಸಂ. | ಇಲಾಖೆಗಳು | ಪ್ರತಿ ವರ್ಷ ಆಯಾಯ ಇಲಾಖೆಗೆ ನೀಡಿರುವ ಅನುದಾನವನ್ನು ಸಮರ್ಪಕವಾಗಿ ಆ ಇಲಾಖೆಯವರು ಖರ್ಚು ಮಾಡಿದ್ದಾರೆಯೇ; ಖರ್ಚು ಮಾಡದಿದ್ದಲ್ಲಿ ಕಾರಣವೇನು; ಆಯಾಯ ಇಲಾಖೆಯಲ್ಲಿ ಉಳಿದ ಅನುದಾನವೆಷ್ಟು; | ಖರ್ಚು ಮಾಡದೇ ಉಳಿದ ಅನುದಾನವನ್ನು ಆ ಇಲಾಖೆಯವರು ಮುಂದಿನ ವರ್ಷಕ್ಕೆ ಉಳಿಸಿಕೊಂಡಿದ್ದಾರೆಯೇ ಅಥವಾ ಹಣಕಾಸು ಇಲಾಖೆಗೆ ಹಿಂದಿರುಗಿಸಿದ್ದಾರೆಯೇ; |
|---|---|---|---|
| | | ಅನುದಾವು ಉಳಿಕೆಯಾಗಿರುತ್ತದೆ. ಮುಂದಿನ ವರ್ಷದಲ್ಲಿ ವೆಚ್ಚಭರಿಸಲಾಗುತ್ತದೆ.<br>ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ:-<br>ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗುತ್ತಿದ್ದು, ಆಯಾ ವರ್ಷದಲ್ಲಿ ಬಿಡುಗಡೆಯಾದ ಮೊತ್ತವನ್ನು ರಸ್ತೆ ಕಾಮಗಾರಿಗಳಿಗೆ ಟೆಂಡರ್ ಕರೆದು ಕಾರಮಗಾರಿ ನಿರ್ವಹಿಸಲು ಕ್ರಮವಹಿಸಲಾಗಿರುತ್ತದೆ. | ಅನುದಾನವನ್ನು ಖಜಾನೆ-02ರಲ್ಲಿಯೇ ನಿರ್ವಹಿಸಿದ್ದ ರಿಂದ ಖಜಾನೆ-02ರಲ್ಲಿ ವರ್ಷದ ಅಂತ್ಯಕ್ಕೆ ಉಳಿದಿದ್ದ ರೂ.8.77 ಕೋಟಿಗಳ ಅನುದಾನ ವ್ಯಪಗತವಾಗಿರುತ್ತದೆ.<br>ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ:-<br>ಆಯಾ ವರ್ಷದಲ್ಲಿ ಉಳಿದ ಅನುದಾನವನ್ನು ಮುಂದುವರೆದ ಕಾಮಗಾರಿಗಳ ಬಿಲ್ ಪಾವತಿಗೆ ಬಳಸಲಾಗಿದೆ. |
| 7 | ವಸತಿ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗಿದೆ. | ಉದ್ಭವಿಸುವುದಿಲ್ಲ. |
| 8 | ಜಲ ಸಂಪನ್ಮೂಲ | ವಿಶ್ವೇಶ್ವರಯ್ಯ ಜಲ ನಿಗಮ ನಿಯಮಿತ:-<br>2017-18ನೇ ಸಾಲಿನಿಂದ 2019-20ನೇ ಸಾಲಿನವರೆಗೆ ಉಳಿದ ಅನುದಾನವನ್ನು ಮುಂದುವರೆದ ಕಾಮಗಾರರಿಗಳಿಗೆ ವೆಚ್ಚಮಾಡಲಾಗುತ್ತಿದೆ. 2019-20ನೇ ಸಾಲಿನ ಕಾಮಗಾರಿಗಳು ಹೊಸ ಕಾಮಗಾರಿಗಳಿಗೆ ಟೆಂಡರ್ ಆಹ್ವಾನಿಸಿದ್ದು, ಅಂತಿಮಗೊಂಡಿದ್ದು, ಇನ್ನು ಪ್ರಾರಂಭಿಕ ಹಂತದಲ್ಲಿರುವುದರಿಂದ ಮುಕ್ತಾಯ ಶಿಲ್ಕು ಲಭ್ಯವಿರುತ್ತದೆ. | ವಿಶ್ವೇಶ್ವರಯ್ಯ ಜಲ ನಿಗಮ ನಿಯಮಿತ:-<br>ವೆಚ್ಚ ಮಾಡದೇ ಉಳಿದ ಅನುದಾನವನ್ನು ನಿಗಮವು ಮುಂದಿನ ವರ್ಷಕ್ಕೆ ಮುಂದುವರಿದ ಕಾಮಗಾರಿಗಳಿಗಾಗಿ ಬಳಸಿಕೊಳ್ಳಲು ಅವಕಾಶ ಇರುವುದರಿಂದ ಹಣಕಾಸು ಇಲಾಖೆಗೆ ಹಿಂದಿರುಗಿಸಿಸರುವುದಿಲ್ಲ. |
| 9 | ಸಣ್ಣ ನೀರವಾರಿ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗಿದೆ. | ಉದ್ಭವಿಸುವುದಿಲ್ಲ. |
| 10 | ಇಂಧನ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗಿದೆ. | ಉದ್ಭವಿಸುವುದಿಲ್ಲ. |
| 11 | ಮೂಲಭೂತ ಸೌಕರ್ಯ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗಿದೆ. | ಉದ್ಭವಿಸುವುದಿಲ್ಲ. |
| 12 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಅಸ್ಪತ್ರೆ ಕಟ್ಟಡ ನಿರ್ಮಾಣ/ಉನ್ನತೀಕರಣ :-<br>ಕಾಮಗಾರಿಗಳಿಗೆ ಬಿಡುಗಡೆ ಮಾಡಿರುವ ಅನುದಾನವನ್ನು ಪೂರ್ಣ ಪ್ರಮಾಣದಲ್ಲಿ ಖರ್ಚು ಮಾಡಲಾಗಿದ್ದು, ಯಾವುದೇ ಅನುದಾನ ಉಳಿಕೆಯಾಗಿರುವುದಿಲ್ಲ. | ಅಸ್ಪತ್ರೆ ಕಟ್ಟಡ ನಿರ್ಮಾಣ/ಉನ್ನತೀಕರಣ :-<br>ಉದ್ಭವಿಸುವುದಿಲ್ಲ. |

| ಕ್ರ. ಸಂ. | ಇಲಾಖೆಗಳು | ಪ್ರತಿ ವರ್ಷ ಆಯಾಯ ಇಲಾಖೆಗೆ ನೀಡಿರುವ ಅನುದಾನವನ್ನು ಸಮರ್ಪಕವಾಗಿ ಆ ಇಲಾಖೆಯವರು ಖರ್ಚು ಮಾಡಿದ್ದಾರೆಯೇ; ಖರ್ಚು ಮಾಡದಿದ್ದಲ್ಲಿ ಕಾರಣವೇನು; ಆಯಾಯ ಇಲಾಖೆಯಲ್ಲಿ ಉಳಿದ ಅನುದಾನವೆಷ್ಟು; | ಖರ್ಚು ಮಾಡದೇ ಉಳಿದ ಅನುದಾನವನ್ನು ಆ ಇಲಾಖೆಯವರು ಮುಂದಿನ ವರ್ಷಕ್ಕೆ ಉಳಿಸಿಕೊಂಡಿದ್ದಾರೆಯೇ ಅಥವಾ ಹಣಕಾಸು ಇಲಾಖೆಗೆ ಹಿಂದಿರುಗಿಸಿದ್ದಾರೆಯೇ; |
|---|---|---|---|
| | | ಕರ್ನಾಟಕ ರಾಜ್ಯ ಡ್ರಗ್ ಲಾಜಿಸ್ಟಿಕ್ ಮತ್ತು ವೇರ್ ಹೌಸಿಂಗ್ ಸೊಸೈಟಿ:-<br>ಪ್ರತಿ ವರ್ಷ ಬಿಡುಗಡೆಯಾಗಿರುವ ಅನುದಾನವು ಸಂಪೂರ್ಣ ವೆಚ್ಚವಾಗಿರುತ್ತದೆ.<br>ರಾಷ್ಟ್ರೀಯ ಆರೋಗ್ಯ ಅಭಿಯಾನ ಕಾರ್ಯಕ್ರಮ:-<br>ಪ್ರತಿ ವರ್ಷ ಬಿಡುಗಡೆಯಾಗಿರುವ ಅನುದಾನವು ಸಂಪೂರ್ಣ ವೆಚ್ಚವಾಗಿರುತ್ತದೆ.<br>ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್:-<br>ಪ್ರತಿ ವರ್ಷ ನಿಗದಿಯಾಗುವ ಅನುದಾನವು ಪ್ರಾಥಮಿಕ/ದ್ವಿತೀಯ ಹಾಗೂ ತೃತೀಯ ಹಂತದ ಚಿಕಿತ್ಸೆಗಾಗಿ ಬಿಡುಗಡೆಮಾಡುವುದರಿಂದ ಅನುದಾನವು ಸಂಪೂರ್ಣ ವೆಚ್ಚವಾಗಿರುತ್ತದೆ | ಕರ್ನಾಟಕ ರಾಜ್ಯ ಡ್ರಗ್ ಲಾಜಿಸ್ಟಿಕ್ ಮತ್ತು ವೇರ್ ಹೌಸಿಂಗ್ ಸೊಸೈಟಿ:-<br>ಉದ್ಭವಿಸುವುದಿಲ್ಲ<br>ರಾಷ್ಟ್ರೀಯ ಆರೋಗ್ಯ ಅಭಿಯಾನ ಕಾರ್ಯಕ್ರಮ:-<br>ಉದ್ಭವಿಸುವುದಿಲ್ಲ.<br>ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್:-<br>ಉದ್ಭವಿಸುವುದಿಲ್ಲ. |
| 13 | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗಿದೆ. | ಉದ್ಭವಿಸುವುದಿಲ್ಲ. |
| 14 | ಉನ್ನತ ಶಿಕ್ಷಣ | 2015-16ನೇ ಸಾಲಿನಿಂದ 2019-20ನೇ ಸಾಲಿನವರೆಗೆ ವಿಶೇಷ ಅಭಿವೃದ್ಧಿ ಯೋಜನೆಯಡಿ ಕಾಲೇಜು ಶಿಕ್ಷಣ ಇಲಾಖೆಗೆ ಒದಗಿಸಲಾದ ಅನುದಾನವನ್ನು ಸಮರ್ಪಕವಾಗಿ ಬಳಸಿಕೊಳ್ಳಲಾಗಿದೆ. | ಉದ್ಭವಿಸುವುದಿಲ್ಲ |
| 15 | ಕಾರ್ಮಿಕ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗಿದೆ. | ಉದ್ಭವಿಸುವುದಿಲ್ಲ. |
| 16 | ಸಮಾಜ ಕಲ್ಯಾಣ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗಿದೆ. | ಉದ್ಭವಿಸುವುದಿಲ್ಲ. |
| 17 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗಿದೆ. | ಉದ್ಭವಿಸುವುದಿಲ್ಲ. |
| 18 | ಪ್ರವಾಸೋದ್ಯಮ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗಿದೆ. | ಉದ್ಭವಿಸುವುದಿಲ್ಲ. |
| 19 | ಅಲ್ಪಸಂಖ್ಯಾತರ ಇಲಾಖೆ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗಿದೆ. | ಉದ್ಭವಿಸುವುದಿಲ್ಲ. |
| 20 | ಸಹಕಾರ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗಿದೆ. | ಉದ್ಭವಿಸುವುದಿಲ್ಲ. |

| ಕ್ರ ಸಂ. | ಇಲಾಖೆಗಳು | ಪ್ರತಿ ವರ್ಷ ಆಯಾಯ ಇಲಾಖೆಗೆ ನೀಡಿರುವ ಅನುದಾನವನ್ನು ಸಮರ್ಪಕವಾಗಿ ಆ ಇಲಾಖೆಯವರು ಖರ್ಚು ಮಾಡಿದ್ದಾರೆಯೇ; ಖರ್ಚು ಮಾಡದಿದ್ದಲ್ಲಿ ಕಾರಣವೇನು; ಆಯಾಯ ಇಲಾಖೆಯಲ್ಲಿ ಉಳಿದ ಅನುದಾನವೆಷ್ಟು; | ಖರ್ಚು ಮಾಡದೇ ಉಳಿದ ಅನುದಾನವನ್ನು ಆ ಇಲಾಖೆಯವರು ಮುಂದಿನ ವರ್ಷಕ್ಕೆ ಉಳಿಸಿಕೊಂಡಿದ್ದಾರೆಯೇ ಅಥವಾ ಹಣಕಾಸು ಇಲಾಖೆಗೆ ಹಿಂದಿರುಗಿಸಿದ್ದಾರೆಯೇ; |
|---|---|---|---|
| 21 | ಕೌಶಲ್ಯ ಅಭಿವೃದ್ಧಿ ಇಲಾಖೆ | 2011-12 ರಿಂದ 2019-20ನೇ ಸಾಲಿನವರೆಗೆ ವಿಶೇಷ ಅಭಿವೃದ್ಧಿ ಯೋಜನೆಯಡಿ ರೂ.17605.66 ಬಿಡುಗಡೆಯಾಗಿದ್ದು, ರೂ.16752.16 ವೆಚ್ಚವಾಗಿರುತ್ತದೆ. ರೂ.2053.50 ಲಕ್ಷಗಳ ಕಾಮಗಾರಿಗಳು ಪ್ರಗತಿಯಲ್ಲಿದೆ. | ಸಂಸ್ಥೆಯಲ್ಲಿ ಉಳಿದ ರೂ.853.50 ಲಕ್ಷಗಳ ಅನುದಾನವನ್ನು ಕಾಮಗಾರಿಗಳ ವೆಚ್ಚಕ್ಕಾಗಿ ಬಳಸಿಕೊಳ್ಳಲಾಗುವುದು ಮತ್ತು ಕಾಮಗಾರಿಗಳು ಪ್ರಗತಿಯಲ್ಲಿದೆ. |
| 22 | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಪ್ರತಿ ವರ್ಷ ನಿಗದಿಪಡಿಸುವ ಅನುದಾನವು ಸಮರ್ಪಕವಾಗಿ ಖರ್ಚು ಮಾಡಲಾಗುತ್ತಿದ್ದು, 2019-20ನೇ ಸಾಲಿನಲ್ಲಿ ಒದಗಿಸಲಾದ ಅನುದಾನದಲ್ಲಿ ರೂ.2229.36 ಲಕ್ಷಗಳು ಉಳಿಕೆಯಾಗಿರುತ್ತದೆ. | ಉಳಿಕೆಯಾಗಿರುವ ರೂ.2229.36 ಲಕ್ಷಗಳ ಅನುದಾನವನ್ನು 2016-17ನೇ ಸಾಲಿನಲ್ಲಿ ಕೈಗೊಂಡಿರುವ 50 ಮೆಟ್ರಿಕ್ ಪೂರ್ವ/ನಂತರ ವಿದ್ಯಾರ್ಥಿನಿಲಯಗಳ ಕಟ್ಟಡ ನಿರ್ಮಾಣದ ಪೈಕಿ 23 ಮುಂದುವರೆದ ಕಾಮಗಾರಿಗಳಿಗೆ ಬಿಡುಗಡೆ ಮಾಡಬೇಕಿರುತ್ತದೆ. |

(ಚುಕ್ಕೆ ಗುರುತಿಲ್ಲದ ಪ್ರಶ್ನೆ 1781ಕ್ಕೆ ಉತ್ತರ)

******

ಅನುಬಂಧ–4

ವಿಶೇಷ ಅಭಿವೃದ್ಧಿ ಯೋಜನೆಯಡಿ 2007–08ರಿಂದ 2020–21ನೇ ಸಾಲಿನವರೆಗೆ ವೆಚ್ಚಮಾಡಿರುವ ಅನುದಾನದ ವಿವರ:–

ರೂ.ಕೋಟಿಗಳು

| ಕ್ರ ಸಂ | ವರ್ಷವಾರು | ಅನುದಾನ | ಪ್ರಾರಂಭಿಕ ಶಿಲ್ಕು | ಒಟ್ಟು ಅನುದಾನ | ಬಿಡುಗಡೆ | ವೆಚ್ಚ | ಒಟ್ಟು ಅನುದಾನಕ್ಕೆ %ವಾರು ಬಿಡುಗಡೆ | ಬಿಡುಗಡೆಗೆ %ವಾರು ವೆಚ್ಚ |
|---|---|---|---|---|---|---|---|---|
| 1 | 2007–08 | 1571.50 | 0.00 | 1571.50 | 827.93 | 808.48 | 52.68 | 97.65 |
| 2 | 2008–09 | 2547.34 | 0.00 | 2547.34 | 1369.26 | 1153.94 | 53.75 | 84.27 |
| 3 | 2009–10 | 2578.83 | 0.00 | 2578.83 | 1731.12 | 1543.11 | 67.13 | 89.14 |
| 4 | 2010–11 | 2584.00 | 0.00 | 2584.00 | 1924.47 | 1762.59 | 74.48 | 91.59 |
| 5 | 2011–12 | 2975.64 | 0.00 | 2984.14 | 2529.99 | 2200.16 | 84.78 | 86.96 |
| 6 | 2012–13 | 2680.00 | 0.00 | 2680.00 | 2464.83 | 2402.92 | 91.97 | 97.49 |
| 7 | 2013–14 | 2925.60 | 0.00 | 2925.60 | 2053.65 | 2067.56 | 70.20 | 100.68 |
| 8 | 2014–15 | 1228.48 | 0.00 | 2267.18 | 1370.54 | 1256.57 | 60.45 | 91.68 |
| 9 | 2015–16 | 2300.02 | 0.00 | 2300.02 | 1967.49 | 1805.42 | 85.54 | 91.76 |
| 10 | 2016–17 | 3000.00 | 0.00 | 2998.83 | 2753.04 | 2492.59 | 91.80 | 90.54 |
| 11 | 2017–18 | 3000.00 | 0.00 | 2977.92 | 2546 | 2496.77 | 85.50 | 98.07 |
| 12 | 2018–19 | 3007.00 | 552.77 | 3532.97 | 3271.11 | 2979.97 | 92.59 | 90.40 |
| 13 | 2019–20 | 3010.02 | 548.05 | 3599.25 | 2875.17 | 3130.04 | 79.88 | 108.00 |
| 14 | 2020–21 (ಜುಲೈ–2020) | 2413.30 | 285.97 | 2699.26 | 265.22 | 159.19 | 9.82 | 60.02 |
| | **ಒಟ್ಟು** | **35821.73** | **1386.79** | **38246.84** | **27949.82** | **26259.31** | **73.07** | **93.95** |

(ಚುಕ್ಕೆ ಗುರುತಿಲ್ಲದ ಪ್ರಶ್ನೆ 1781ಕ್ಕೆ ಉತ್ತರ)

********

ಪ್ರದೇಶಾಭಿವೃದ್ಧಿ ಮಂಡಳಿ ವಿಭಾಗ,
ಬಹುಮಹಡಿ ಕಟ್ಟಡ,
ಬೆಂಗಳೂರು-560001,
ದೂರವಾಣಿ 080-220321477,
ಇಮೇಲ್ : directoradb@gmail.com



ಕರ್ನಾಟಕ ಸರ್ಕಾರ

ಕರ್ನಾಟಕ ಸರ್ಕಾರದ ಸಚಿವಾಲಯ,
ಯೋಜನೆ, ಕಾರ್ಯಕ್ರಮ
ಸಂಯೋಜನೆ ಮತ್ತು ಸಾಂಖ್ಯಿಕ
ಇಲಾಖೆ,
ಬೆಂಗಳೂರು.

ಸಂಖ್ಯೆ ಪಿಡಿ 34 ಎಸ್‌ಡಿಪಿ 2020

ದಿನಾಂಕ: 08 ಆಕ್ಟೋಬರ್ 2020.

ಇವರಿಗೆ,

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ಪ್ರಶ್ನೆಗಳ ಶಾಖೆ, ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ:- ಕರ್ನಾಟಕ ವಿಧಾನಸಭೆಯ ಸದಸ್ಯರಾದ ಶ್ರೀ ಚಂದ್ರಪ್ಪ ಎಂ.(ಹೊಳಲ್ಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1789ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ:- ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆಯ ಪ್ರಶ್ನೆ ಸಂಖ್ಯೆ: 15ನೇವಿಸ/7/ಪ್ರ.ಸಂ.1781/2020, ದಿನಾಂಕ: 09.09.2020.

******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದಲ್ಲಿ ತಿಳಿಸಿರುವಂತೆ ದಿನಾಂಕ:29.09.2020ರಂದು ಕರ್ನಾಟಕ ವಿಧಾನಸಭೆಯ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1781ಕ್ಕೆ ಉತ್ತರವನ್ನು ಸಿದ್ಧಪಡಿಸಿ (ಕನ್ನಡ-5ಪ್ರತಿ) ಯನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

Received 12/10/2020

ತಮ್ಮ ವಿಶ್ವಾಸಿ,

(ಡಿ.ಚಂದ್ರಶೇಖರಯ್ಯ)
ನಿರ್ದೇಶಕರು
ಯೋಜನೆ, ಕಾರ್ಯಕ್ರಮ ಸಂಯೋಜನೆ
ಹಾಗೂ ಸಾಂಖ್ಯಿಕ ಇಲಾಖೆ.

ಪ್ರತಿಯನ್ನು:

3. ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ, ಇವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
4. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಇವರ ಆಪ್ತ ಕಾರ್ಯದರ್ಶಿ

# ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 156 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:22.10.2020

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಪಾಟೀಲ್ ಎಂ.ವೈ. (ಅಫ್ಜಲ್‌ಪುರ್) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1780 ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಪಾಟೀಲ್ ಎಂ.ವೈ. (ಅಫ್ಜಲ್‌ಪುರ್) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1780 ಕ್ಕೆ ಉತ್ತರಗಳ 25 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. Mangalagowri

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

Received
28/10/2020

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1780 |
| ಸದಸ್ಯರ ಹೆಸರು | : | ಶ್ರೀ ಪಾಟೀಲ್ ಎಂ.ವೈ. (ಅಫ್ಜಲ್‌ಪುರ್) |
| ಉತ್ತರಿಸಬೇಕಾದ ದಿನಾಂಕ | : | 29.09.2020 |
| ಉತ್ತರಿಸುವ ಸಚಿವರು | : | ಮಾನ್ಯ ಮುಖ್ಯಮಂತ್ರಿಗಳು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ಅಫಜಲಪೂರ ಮತಕ್ಷೇತ್ರದ ಕಲಬುರಗಿ ತಾಲ್ಲೂಕಿನ ಷರಹತಾಬಾದ್ ವಲಯದಲ್ಲಿ ಥರ್ಮಲ್ ವಿದ್ಯುತ್ ಉತ್ಪಾದನೆಗಾಗಿ (ಥರ್ಮಲ್ ಯೋಜನೆ) ಸ್ಥಾವರ ಸ್ಥಾಪಿಸಲು ರೈತರಿಂದ ಸಾವಿರಾರು ಎಕರೆ ಭೂಮಿಯನ್ನು ಖರೀದಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಅಫಜಲಪುರ ಮತ ಕ್ಷೇತ್ರದ ವ್ಯಾಪ್ತಿಗೆ ಬರುವ, ಕಲಬುರಗಿ ತಾಲ್ಲೂಕಿನ ಫರಹತಾಬಾದ್ ಹೋಬಳಿಯ ನದಿಸಿನ್ನೂರು, ಕಿರಣಗಿ ಮತ್ತು ಫಿರೋಜಾಬಾದ್ ಗ್ರಾಮಗಳ ವ್ಯಾಪ್ತಿಯಲ್ಲಿ ಉದ್ದೇಶಿತ ಶಾಖೋತ್ಪನ್ನ ವಿದ್ಯುತ್ ಘಟಕ ಸ್ಥಾಪನೆ ಮಾಡಲು 1601 ಎಕರೆ 13 ಗುಂಟೆ ಜಮೀನನ್ನು ಕಲಬುರಗಿ ಜಿಲ್ಲಾಧಿಕಾರಿಗಳ ಮೂಲಕ ಭೂಸ್ವಾಧೀನ ಮಾಡಿಕೊಳ್ಳಲಾಗಿದೆ. ಈ ಭೂಸ್ವಾಧೀನ ಪ್ರಕ್ರಿಯೆಯನ್ನು 2010-11 ನೇ ಸಾಲಿನಲ್ಲಿ ಹಳೇ ಭೂಸ್ವಾಧೀನ ಕಾಯ್ದೆ 1894 ಪ್ರಕಾರ ಮಾಡಿಕೊಳ್ಳಲಾಗಿರುತ್ತದೆ.<br><br>ಭೂ-ಸ್ವಾಧೀನ ಪಡಿಸಿಕೊಂಡಿರುವ ಜಮೀನುಗಳಿಗೆ ರೈತರು ಒಪ್ಪಿ ಸಮ್ಮತಿಸಿದ ಪರಿಹಾರವನ್ನು ಕಲಬುರಗಿ ಜಿಲ್ಲಾಧಿಕಾರಿಗಳು ರವರ ಸಮಕ್ಷಮದಲ್ಲಿ ವಿತರಿಸಲಾಗಿದೆ, ಯಾವುದೇ ಪರಿಹಾರ ವಿತರಣೆ ಬಾಕಿಯಿರುವುದಿಲ್ಲ. |
| ಆ) | ಫಲವತ್ತಾರ ಭೂಮಿಯನ್ನು ಕಳೆದುಕೊಂಡ ರೈತರ ಕುಟುಂಬಗಳು ಉದ್ಯೋಗಕ್ಕೆ ಬೇರೆ ಕಡೆ ಗುಳೆ ಹೊಗುತ್ತಿರುವರು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಭೂ-ಸ್ವಾಧೀನದಿಂದ ವಶ ಪಡಿಸಿಕೊಂಡಿರುವ ಜಮೀನು ವಿದ್ಯುತ್ ಸ್ಥಾವರ ಸ್ಥಾಪನೆಗಾಗಿಯೇ ಹೊರತು ಯಾವುದೇ ಕಾರ್ಖಾನೆ ಸ್ಥಾಪಿಸಲು ಉಪಯೋಗಿಸುವುದಿಲ್ಲ. ವಿದ್ಯುತ್ ಸ್ಥಾವರಗಳ ನಿರ್ಮಾಣಕ್ಕೆ ಸೂಕ್ತ ಮತ್ತು ಅಗತ್ಯವಿರುವ ತಂತ್ರಜ್ಞಾನದೊಂದಿಗೆ ನಿರ್ಮಾಣ ಮಾಡಲು Pollution Control Board ನಿಂದ ಅನುಮತಿ ಪಡೆದ ನಂತರವೇ ಸ್ಥಾಪಿಸಲಾಗುವುದು. |
| ಇ) | ಹಾಗಿದ್ದಲ್ಲಿ, ಈ ಕಾರ್ಖಾನೆಯು ಸ್ಥಾಪನೆಯಾದಲ್ಲಿ ವಾಯುಮಾಲಿನ್ಯದ ಪ್ರಭಾವದಿಂದ ಜನರ ಆರೋಗ್ಯದ ಮೇಲೆ ಹಾಗೂ ದೇಶದ ಕೃಷಿ ಉತ್ಪನ್ನದ ಮೇಲೆ ಆಗುವ ದುಷ್ಪರಿಣಾಮಗಳು ಸರ್ಕಾರದ ಗಮನಕ್ಕೆ ಬಂದಿದೆಯೇ ; | |

| | | |
|---|---|---|
| ಈ) | ಹಾಗಿದ್ದಲ್ಲಿ, ಸದರಿ ರೈತರ ಜಮೀನನ್ನು ಕಡಿಮೆ ಬೆಲೆಯಲ್ಲಿ ಖರೀದಿ ಮಾಡಿರುವ ಬಂಡವಾಳಶಾಹಿಗಳ ವಿರುದ್ಧ ಯಾವಾಗ ಕ್ರಮ ಕೈಗೊಳ್ಳಲಾಗುವುದು ? (ವಿವರ ನೀಡುವುದು) | ಭೂ–ಸ್ವಾಧೀನ ಮಾಡಿಕೊಳ್ಳಲಾದ ಪ್ರದೇಶಕ್ಕೆ ಸಂಬಂಧಪಟ್ಟ ರೈತರಿಗೆ ಒಪ್ಪಿಗೆಯಾಗುವಂತಹ ಭೂ ಪರಿಹಾರವನ್ನು ಕರ್ನಾಟಕ ಸರ್ಕಾರವು 2010ನೇ ಸಾಲಿನಲ್ಲಿ ನೀಡಿರುತ್ತದೆ ಮತ್ತು ಭೂಸ್ವಾಧೀನ ಮಾಡಿಕೊಂಡ ಜಮೀನುಗಳಿಗೆ ರೈತರು ಒಪ್ಪಿ ಸಮ್ಮತಿಸಿದ್ದರಿಂದ ಆ ಕಾಲಕ್ಕೆ ಪ್ರಸ್ತುತವಿದ್ದ ಉತ್ತಮ ಭೂ ಪರಿಹಾರವನ್ನು ಕಲಬುರಗಿ ಜಿಲ್ಲಾಧಿಕಾರಿಗಳ ಮುಖಾಂತರ ವಿತರಿಸಲಾಗಿದೆ. ಈ ಬಗ್ಗೆ ಎಲ್ಲಾ ಮಾಹಿತಿಗಳನ್ನು ಭೂಮಾಲೀಕರುಗಳಿಗೆ ನೀಡಲಾಗಿದೆ.<br><br>ಪ್ರಸ್ತುತ ರೈತರಿಂದ ಸ್ವಾಧೀನಪಡಿಸಿಕೊಂಡ ಜಮೀನು ಸರ್ಕಾರದ ಅಧೀನದಲ್ಲಿಯೇ ಇರುತ್ತದೆ. |

**ಸಂಖ್ಯೆ: ಏನರ್ಜಿ 156 ಪಿಪಿಎಂ 2020**

ಬಿ.ಎಸ್. ಯಡಿಯೂರಪ್ಪ
(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 149 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:22.10.2020

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಗೌರಿಶಂಕರ್ ಡಿ.ಸಿ. (ತುಮಕೂರು ಗ್ರಾಮಾಂತರ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 640 ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಗೌರಿಶಂಕರ್ ಡಿ.ಸಿ. (ತುಮಕೂರು ಗ್ರಾಮಾಂತರ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 640 ಕ್ಕೆ ಉತ್ತರಗಳ 25 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. Mangalagowri

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

Received
28/10/2020

